# ಅಚಲ ತಿಂಗಳ ಪತ್ರಿಕೆ

30

ಬೆಲೆ - ಬಿಡಿಪ್ರತಿ : 8 ರೂ.

ಡಿಸೆಂಬರ್ - 2004

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 19 ಸಂಚಿಕೆ : 12

ಸಂಪಾದಕ ಮಂಡಲಿ

ಎನ್. ಗಾಯತ್ರಿ

ನೇಮಿಚಂದ್ರ, ದೇವಿ,

ಶಾಂತಾನಾಗರಾಜ್

ಹೆಚ್. ಎನ್: ಗೀತಾ

ಹೇಮಲತಾ ಮಹಿಷಿ

ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

Printed at
Lipi Mudrana
Bangalore - 560 004


ಆತ್ಮೀಯರೆ,

ಕಳೆದ 19 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ಬದಲಾಗಿದೆ

ವಾರ್ಷಿಕ ಚಂದಾ - ರೂ. 50/- (ವ್ಯಕ್ತಿಗಳಿಗೆ)
ರೂ. 100/- (ಸಂಸ್ಥೆಗಳಿಗೆ)
ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)


**ಅಚಲ ವಿಳಾಸ**

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಸಂಪಾದಕೀಯ

ಕಳೆದ ಕೆಲವು ತಿಂಗಳ ಹಿಂದೆ ಸರ್ಕಾರವು ಪ್ರಕಟಿಸಿದ ಜನ ಸಂಖ್ಯಾ ಅಂಕಿ ಸಂಖ್ಯೆಗಳಲ್ಲಿ ಹಿಂದೂಗಳ ಸಂಖ್ಯೆಯಲ್ಲಿ ಇಳಿತವೂ, ಮುಸ್ಲಿಂರ ಸಂಖ್ಯೆಯಲ್ಲಿ ಏರುಮುಖವೂ ಆಗುತ್ತಿದೆಯೆಂಬ ವಿಷಯ ಕಂಡು ರಾಜಕೀಯ ಪಕ್ಷಗಳು ಬೊಬ್ಬೆಯಿಟ್ಟವು. ವಿಶೇಷವಾಗಿ ಭಾರತೀಯ ಜನತಾಪಕ್ಷದ ನಾಯಕರು ದೇಶದ ಎಲ್ಲ ಜನರಿಗೂ ಎರಡು ಮಕ್ಕಳ ಮಿತಿಯನ್ನು ಕಡ್ಡಾಯ ಮಾಡಬೇಕೆಂಬ ಕುಟುಂಬ ಯೋಜನಾ ನೀತಿಯನ್ನು ಜಾರಿಗೆ ತರಲು ಸರ್ಕಾರವನ್ನು ಒತ್ತಾಯಿಸಿದವು. ಈ ರೀತಿ ಕುಟುಂಬ ಯೋಜನೆಯನ್ನು ಕುರಿತಂತೆ ಚಿಂತಿಸುವುದೂ ಕೂಡ ಮಹಿಳಾ ವಿರೋಧಿ ದೃಷ್ಟಿಕೋನವಾಗುತ್ತದೆ.

ಭಾರತಕ್ಕೆ ಪ್ರಥಮಗಳ ಹೆಗ್ಗಳಿಕೆ ಬಹಳ ಕಡಿಮೆ. ಅಂತಹ ವಿರಳವಾದ ಹೆಗ್ಗಳಿಕೆಯಲ್ಲಿ 'ಕುಟುಂಬ ಯೋಜನಾ ನೀತಿ'ಯನ್ನು ಅಳವಡಿಸಿಕೊಂಡ ರಾಷ್ಟ್ರಗಳಲ್ಲಿ ಭಾರತಾವೂ ಮೊದಲನೆಯದು. ಮಹಿಳೆಯರಿಗೆ ತಮ್ಮ ದೇಹ ಮತ್ತು ಸಂತಾನ ನಿಯಂತ್ರಣದ ಮೇಲೆ ಹಕ್ಕು ಇರಬೇಕು ಎಂಬುದನ್ನು ಗೌರವಿಸುವವರೆಲ್ಲ ಮತ್ತು ಅದಕ್ಕಾಗಿ ಸುರಕ್ಷಿತವಾದ ಹಾಗೂ ಯಶಸ್ವಿ ಗರ್ಭನಿರೋಧಕದ ಅಗತ್ಯವಿದೆಯೆಂದು ಒಪ್ಪುವವರೆಲ್ಲಾ ಸರ್ಕಾರದ 'ಕುಟುಂಬ ಯೋಜನಾ ನೀತಿ'ಯನ್ನು ಬೆಂಬಲಿಸಿದ್ದಾರೆ. ಅವರ ಕಾರ್ಯಕ್ರಮಗಳೊಂದಿಗೆ ಕೈಜೋಡಿಸಿದ್ದಾರೆ. ಆದರೆ ಮಹಿಳೆಯರ ಇಚ್ಛೆ ಮತ್ತು ಊಹೆಯಂತೆ ಭಾರತದಲ್ಲಿ ಕುಟುಂಬ ಯೋಜನಾ ಕಾರ್ಯಕ್ರಮಗಳು ನಡೆಯುತ್ತಿಲ್ಲ.

ಕುಟುಂಬ ಯೋಜನೆಯ ಹೆಸರಿನಲ್ಲಿ ಗುರಿ ತಲುಪಬೇಕೆನ್ನುವ ಸೂತ್ರವನ್ನು ಸರ್ಕಾರ ಈಗ ಕೈಬಿಟ್ಟಿರುವುದೇನೋ ಸ್ವಾಗತಾರ್ಹವಾದ ವಿಷಯ. ಗುರಿ ತಲುಪಬೇಕೆನ್ನುವ ಸಂಭ್ರಮದಲ್ಲಿ ಸಂಜಯಗಾಂಧಿ ಕಾಲದಲ್ಲಿ ನಡೆದ ಅನಾಹುತಗಳ ದುಃಸ್ವಪ್ನದಿಂದ ಸರ್ಕಾರ ಈ ಬದಲಾದ ನಿಲುವನ್ನು ತಳೆದಿರಬಹುದು. ಭ್ರೂಣದ ಹಂತದಲ್ಲಿ ಅದರ ಕುಂದುಕೊರತೆಗಳನ್ನು ಕಂಡು ಹಿಡಿಯಲು ಬೇಕಾದ ಸುಸಜ್ಜಿತವಾದ ಮತ್ತು ಸುಕ್ಷೇಮವಾದ ಪ್ರಯೋಗಾಲಯಗಳಿಲ್ಲದ ನಮ್ಮ ದೇಶದಲ್ಲಿ ಭ್ರೂಣದ ಲಿಂಗ ಪತ್ತೆ ಹಚ್ಚುವ ಭರದಿಂದಸಾಗಿ ಸ್ತ್ರೀ ಭ್ರೂಣಹತ್ಯೆಗೆ ಸ್ತ್ರೀಯರ ಸಂಖ್ಯೆ ಕಡಿಮೆಯಾಗುತ್ತಿದೆ.

ಭಾರತದಲ್ಲಿ ಶೇಖಡ 95ರಷ್ಟು ಸಂತಾನಹರಣ ಚಿಕಿತ್ಸೆಗಳು ಭಾರತೀಯ ಮಹಿಳೆಯ ಮೇಲೆಯೇ ನಡೆಯುವಂತಹುದು.

ಇದರ ಜೊತೆಗೆ ಗರ್ಭನಿರೋಧಕಗಳು ಕಳಪೆ ದರ್ಜೆಯವು. ಇಲ್ಲವೆ ವಿಫಲವಾಗುವಂತಹುದು. ಇಲ್ಲವೆ ಅತ್ಯಂತ ಭಯಾನಕವಾದ ನಾರ್‌ಪ್ಲಾಂಟ್, ಕ್ವಿನ್‌ಕ್ರೈನ್ ಮುಂತಾದ ಗರ್ಭ ನಿರೋಧಕಗಳ ಬಳಕೆಯನ್ನು ತಡೆಯದ ಸರ್ಕಾರ ಹೆಣ್ಣನ್ನು ಬಲಿಪಶುವಾಗಿಸಿದೆ.

ಈ ಸಂದರ್ಭದಲ್ಲಿ ಸರ್ಕಾರ ಗಂಭೀರವಾಗಿ ಪರಿಗಣಿಕಬೇಕಾದ ಅಂಶಗಳಿವು. ಕುಟುಂಬ ನಿಯಂತ್ರಣಕ್ಕೆಂದು ನೀತಿಯೊಂದನ್ನು ರೂಪಿಸುವುದರ ಬದಲು ಸಮಗ್ರವಾದ ಆರೋಗ್ಯ ನೀತಿಯನ್ನು ರೂಪಿಸಬೇಕು.

ಕುಟುಂಬ ಯೋಜನೆಯ ಗುರಿ ಸಾಧಿಸಲು ಕೇವಲ ಮಹಿಳೆಯರನ್ನೇ ಗುರಿಪಡಿಸುವ ಕಾರ್ಯಕ್ರಮ ಮಾಡಬಾರದು.

ಹೊಸ ಔಷಧಿಗಳು ಮತ್ತು ಸಂತಾನ ನಿಯಂತ್ರಣ ವಿಧಾನಗಳನ್ನು ಪ್ರಯೋಗಾಲಯದಲ್ಲಿ ಯಶಸ್ವಿ ಎಂದು ಸಿದ್ಧ ಮಾಡಿಕೊಳ್ಳದ ಹೊರತು ಸ್ತ್ರೀಯರ ಮೇಲೆ ಪ್ರಯೋಗಿಸಬಾರದು.

ಅತ್ಯಂತ ಹಾನಿಕಾರಕ ಔಷಧಿಗಳನ್ನು ನಿಷೇಧಿಸಬೇಕು.

ಕುಟುಂಬ ಯೋಜನೆಯನ್ನು ನಿಷೇಧಾತ್ಮಕ ವಿಧಾನಗಳಿಂದ ಹೇರಬಾರದು. ಸ್ವಯಿಚ್ಛೆಯಿಂದ ಮಾಡುವಂತಿರಬೇಕು.

ಗರ್ಭಿಣಿ ಸ್ತ್ರೀಯರ ಆರೋಗ್ಯ ತನಿಖೆ ಮತ್ತು ಪೌಷ್ಟಿಕ ಆಹಾರದ ಸರಬರಾಜಿನ ಕಡೆ ಗಮನ ಕೊಡಬೇಕು.

ಶಿಶು ಮರಣ ಸಂಖ್ಯೆಯ ಇಳಿಮುಖಕ್ಕೆ ಪ್ರಯತ್ನಿಸಬೇಕು.

ಬಾಲ್ಯ ವಿವಾಹವನ್ನು ತಡೆಗಟ್ಟುವ ನಿಟ್ಟಿನಲ್ಲಿ ವಿದ್ಯಾಭ್ಯಾಸ ಸೌಕರ್ಯವನ್ನು ವಿಸ್ತರಿಸಬೇಕು.

**- ಗಾಯತ್ರಿ ಎಸ್.**

# ಗುಲಾಮಗಿರಿಯ ಸಂಕಥನ : ವಿವಾಹ / ಕುಟುಂಬ ವ್ಯವಸ್ಥೆ

– ಡಾ।। ಕವಿತಾ ರೈ. ಬಿ.ಆರ್.

ಬದಲಾವಣೆಯ ನಿರಂತರ ಪ್ರಕ್ರಿಯೆಯನ್ನೇ ಮೂಲಭೂತ ಅಂಶವಾಗಿ ಹೊಂದಿರುವ ಇಂದಿನ ಸಮಾಜಗಳಲ್ಲಿ ಪೂರ್ವದ ವಿವಾಹದ ಕುರಿತ ನೀತಿ ನಿಯಮಗಳಿಗೂ ಕಾಲಮಾನಕ್ಕೆ ಅನುಗುಣವಾಗಿರುವ ಆಚರಣೆಗಳಿಗೂ ಸಾಕಷ್ಟು ಅಂತರವಿದೆ. ವಿವಾಹಕ್ಕೆ ಸಂಬಂಧಿಸಿದ ಎಲ್ಲಾ ವಿಚಾರಗಳು, ಪ್ರಶ್ನೆಗಳು ಬದಲಾಗುತ್ತಿರುವ ವರ್ತಮಾನದಲ್ಲಿ ಸದಾ ಸಂವಾದಗಳನ್ನು ನಡೆಸುವಂತೆ ಒತ್ತಾಯಿಸುತ್ತವೆ. ಅಲ್ಲದೆ ವಿವಾಹದ ಕುರಿತ ಎಲ್ಲಾ ತೀರ್ಮಾನಗಳಿಂದ ಗಂಡು ಹೆಣ್ಣಿನ ಸಂಬಂಧಗಳ ಬಗ್ಗೆ ಎರಡು ಮುಲಭೂತವಾದ ದೃಷ್ಟಿಕೋನಗಳಿಂದ ನೋಡುವಂತೆ ಮಾಡುತ್ತದೆ.

ಒಂದು - ಗಂಡಸರು ಮತ್ತು ಹೆಂಗಸರು ಎಂಬ ಸಾಮಾಜಿಕ ಘಟಕಗಳು.

ಎರಡು - ಗಂಡು ಮತ್ತು ಹೆಣ್ಣುಗಳೆಂಬ ನೈಸರ್ಗಿಕ ಭಿನ್ನತೆ.

ವ್ಯಕ್ತಿಯ ಲೈಂಗಿಕ ಸಂಬಂಧಗಳೆಲ್ಲ ಮೊದಲಿನಿಂದಲೂ ಸಮಾಜದಿಂದಲೇ ನಿರ್ಧರಿತಗೊಂಡಿವೆ. ಹೀಗಾಗಿ ಅವು ಏಕಕಾಲಕ್ಕೆ ನೈಸರ್ಗಿಕ ಲೈಂಗಿಕ ಸಂಬಂಧಗಳೂ ಮತ್ತು ಸಾಮಾಜಿಕ ಸಂಬಂಧಗಳೂ ಆಗಿರುವುದು ಸಾಧ್ಯವಿಲ್ಲ. ಪ್ರಕೃತಿ ಮತ್ತು ಮನುಷ್ಯರಿಬ್ಬರೂ ನಿರಂತರವಾಗಿ ಬೆಳೆಯುತ್ತಾ ಬಂದ ಪರಿಣಾಮ ದಿಂದಾಗಿ ಅವವಿಬ್ಬರಿಗೂ ಚರಿತ್ರೆ ಇದೆ. ಆದುದರಿಂದಲೇ ಅವುಗಳನ್ನು ಚಾರಿತ್ರಿಕವಾಗಿ ಗಮನಿಸಬೇಕಾಗುತ್ತದೆ. ಇದರ ಅರ್ಥ ಗಂಡು-ಹೆಣ್ಣಿನ ಸಂಬಂಧಗಳ ಸುತ್ತ ಹಬ್ಬಿಕೊಂಡ 'ನೈತಿಕ ಮೌಲ್ಯಗಳು' ದೇವರಿಂದಾಗಲೀ, ಪ್ರಕೃತಿಯಿಂದಾಗಲೀ ನಿರ್ಧರಿತ ವಾದವುಗಳಲ್ಲ. ಅವು ಎಲ್ಲ ಕಾಲಗಳಲ್ಲೂ ಒಂದೇ ರೀತಿಯಾಗಿ ಇರಲಿಲ್ಲ. ವಿವಾಹದ 'ನೈತಿಕ ಮೌಲ್ಯ'ಗಳೆಂದು ಪರಿಗಣಿತ ಗೊಂಡ ಅಂಶಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಪರಿಷ್ಕಾರ ಗೊಳ್ಳುತ್ತಾ ಬಂದವು. ಈ ಮೌಲ್ಯಗಳು ಎಲ್ಲಾ ಕಾಲದಲ್ಲೂ ಎಲ್ಲಾ ಸಮಾಜಗಳಲ್ಲಿಯೂ ಒಂದೇ ಆಗಿರಲಿಲ್ಲ ಎನ್ನುವುದನ್ನೂ, ಒಂದು ಸಮಾಜದಲ್ಲಿ ಕೂಡ ಎಲ್ಲಾ ಕಾಲಗಳಲ್ಲೂ ಒಂದೇ ರೀತಿಯಾಗಿರಲಿಲ್ಲ ಎನ್ನುವುದನ್ನೂ ಒಪ್ಪಿಕೊಳ್ಳಬೇಕಾಗುತ್ತದೆ.

ಪ್ರಾಚೀನ ಸಮಾಜದ ಲೈಂಗಿಕ ಸಂಬಂಧಗಳು ಆಧುನಿಕ ಸಮಾಜದ ಲೈಂಗಿಕ ಸಂಬಂಧಗಳಿಗಿಂತ ತೀರ ಭಿನ್ನ ಹಾಗೂ ವ್ಯತಿರಿಕ್ತ ಎನ್ನುವುದು ನಿರ್ವಿವಾದ. ವೈದಿಕ ವಿದ್ವಾಂಸರ ಸಾಮಾನ್ಯ ಅಭಿಪ್ರಾಯದಲ್ಲಿ ನಾಲ್ಕು ಯುಗಗಳಲ್ಲಿ ವಂಶಾಭಿವೃದ್ಧಿಗೆ ನಾಲ್ಕು ಭಿನ್ನ ಭಿನ್ನ ರೀತಿಯ ಲೈಂಗಿಕ ಸಂಬಂಧಗಳು ಅಸ್ತಿತ್ವದಲ್ಲಿದ್ದವು. ಇದು ಸಂಪತ್ತಿನ ಉತ್ಪಾದನೆಗೆ ನಾಲ್ಕು ಯುಗಗಳಲ್ಲಿ ಇದ್ದ ಬೇರೆ ಬೇರೆ ರೀತಿಯ ಸಾಮಾಜಿಕ, ಆರ್ಥಿಕ ಸಂಬಂಧಗಳಿಗೆ ಪೂರಕವಾಗಿದೆ ಎನ್ನುವುದು ಗಮನಾರ್ಹ. ಮಹಾಭಾರತದಲ್ಲಿ ಭೀಷ್ಮನು ನಾಲ್ಕು ಯುಗಗಳಲ್ಲಿದ್ದ ಬೇರೆ ಬೇರೆ ರೀತಿಯ ಲೈಂಗಿಕ ಸಂಬಂಧಗಳಿಗೆ ನಾಲ್ಕು ಹೆಸರುಗಳನ್ನು ಹೇಳಿದ್ದಾನೆ. ಅವುಗಳೆಂದರೆ ಸಂಕಲ್ಪ ಸಂಸ್ಪರ್ಶ, ಮೈಥುನ ಮತ್ತು ದ್ವಂದ್ವ. ಇದು ಕೃತ, ತ್ರೇತ, ದ್ವಾಪರ ಮತ್ತು ಕಲಿಯುಗಗಳಿಗೆ ಸಂಬಂಧಿಸಿದವುಗಳಾಗಿವೆ. ಆದರೆ ವಿವಾಹವು ಬಹಿರಂಗವಾಗಿ ಘೋಷಿತವಾದ, ಕ್ರಮಬದ್ಧವಾದ ಹಾಗೂ ಸುವ್ಯವಸ್ಥಿತವಾದ ರೀತಿಯಲ್ಲಿ ಗಂಡು ಹೆಣ್ಣಿನ ಒಡಗೂಡಿ ಬದುಕುವ ಜೀವನ ಕ್ರಮದ ಕಟ್ಟುಪಾಡು. ವಿವಾಹದ ಈ ಒಪ್ಪಂದದಲ್ಲಿ ಆ ದಂಪತಿಗಳಿಗೆ ಹುಟ್ಟುವ ಮಕ್ಕಳ ಹಕ್ಕುಗಳು ಮತ್ತು ಹೊಣೆಗಳು ಸ್ಪಷ್ಟವಾಗಿ ನಿರೂಪಿತವಾಗಿರುತ್ತವೆ. ಪ್ರತಿಯೊಂದು ಸಮಾಜವೂ ಗಂಡ-ಹೆಂಡತಿ ಮತ್ತು ಮಕ್ಕಳ ವಿಷಯದಲ್ಲಿ ಗೊತ್ತಾದ ಹಲವು ನಿಯಮಗಳನ್ನು ನಿರೂಪಿಸುತ್ತವೆ. ಇದನ್ನು ಆಯಾಯ ಸಂಸ್ಕೃತಿ ಗಳು ಅದರ ವಿಕಾಸ ಮುಖೀ ನೆಲೆಗಳಲ್ಲಿ ಮಾನ್ಯ ಮಾಡಿರುತ್ತವೆ. ಸಮಾಜದ ಬೆಳವಣಿಗೆಯ ಮೂರು ಮುಖ್ಯ ಘಟ್ಟಗಳಿಗೆ ಅನುಗುಣವಾದ ಮೂರು ಮುಖ್ಯ ವಿವಾಹ ರೂಪಗಳನ್ನು ಗುರುತಿಸುವುದು ಸಾಧ್ಯವಾಗುತ್ತದೆ. ಅವುಗಳೆಂದರೆ, ಕಿರಾತಾ ವಸ್ಥೆಗೆ ಅನುಗುಣವಾದ ಸಮೂಹ ವಿವಾಹ ; ಅನಾಗರಿಕಾವಸ್ಥೆಗೆ - ಯುಗ್ಮ ವಿವಾಹ ; ನಾಗರಿಕಾವಸ್ಥೆಗೆ - ಏಕಪತ್ನೀ ವಿವಾಹ ಪದ್ಧತಿ. ಕುಟುಂಬದ ಪ್ರಾಚೀನತೆಗೆ ಸಂಬಂಧಿಸಿದಂತೆ ರೋಮನರ ಕುಟುಂಬದ ವ್ಯವಸ್ಥೆಯು ಪರಿಪೂರ್ಣ ಮಾದರಿಯಾಗಿದೆ. Familia ಎಂಬ ಪದಕ್ಕೆ ಮೂಲದಲ್ಲಿ ಯಾವುದೇ ಆದರ್ಶವಾದ ಅರ್ಥಗಳು ಚರಿತ್ರೆಯಲ್ಲಿ ಸಿಗುವುದಿಲ್ಲ. Familia ಪದವು ರೋಮನರು ಆರಂಭದಲ್ಲಿ ಗುಲಾಮರಿಗೆ ಸಂಬಂಧಿಸಿದಂತೆ ಬಳಸುತ್ತಿದ್ದರು. Famulus ಎಂದರೆ ಮನೆಯ ಗುಲಾಮ ಎಂದರ್ಥ. Famulus ಎಂದರೆ ಒಬ್ಬ ವ್ಯಕ್ತಿಗೆ ಸೇರಿದ ಗುಲಾಮರ ಸಂಕುಲ (Familia, id est patrimonium) ಕುಟುಂಬ ಅಂದರೆ ಉತ್ತರಾಧಿಕಾರ ಎನ್ನುವ ಅರ್ಥ ಪ್ರಾಪ್ತವಾಗಿದೆ. ಈ ಉತ್ತರಾಧಿಕಾರವನ್ನು ರೋಮನರಲ್ಲಿ ಉಯಿಲಿನ ಮೂಲಕ ಬಿಟ್ಟುಕೊಡಲಾಗುತ್ತಿತ್ತು. ಇದರಿಂದ ವ್ಯಕ್ತವಾಗುವ ವಿಚಾರವೆಂದರೆ, ರೋಮನರು ವ್ಯಕ್ತಿಗಳ ಒಂದು ಸಾಮಾಜಿಕ ಸಂಘಟನೆಯನ್ನು ಸೂಚಿಸಲು familia ಎಂಬ ನುಡಿಗಟ್ಟನ್ನು ಸೃಷ್ಟಿಸಿದರು. ಈ ಹೊಸ ಸಾಮಾಜಿಕ ಸಂಘಟನೆಯ ಮುಖ್ಯಸ್ಥನು ತನ್ನ ಕೈಕೆಳಗೆ ಹೆಂಡತಿ ಮಕ್ಕಳನ್ನು ಅನೇಕ ಮಂದಿ ಗುಲಾಮರನ್ನೂ ಹೊಂದಿರುತ್ತಿದ್ದ.

ಭಾರತೀಯ ಸಂಸ್ಕೃತಿಯಲ್ಲಿ ಶೋಡಷ ಸಂಸ್ಕಾರಗಳಲ್ಲಿ ವಿವಾಹ ಸಂಸ್ಕಾರಕ್ಕೆ ಅಗ್ರಸ್ಥಾನ ಲಭಿಸಿದೆ. ಆಶ್ರಮಗಳಲ್ಲಿ ಸರ್ವಶ್ರೇಷ್ಠ ಎಂಬ ಪ್ರಶಂಸೆಗೂ, ಋಷಿಗಳಿಂದ 'ಧನ್ಯೋ ಗೃಹಸ್ಥಾಶ್ರಮಃ' (ಗೃಹಸೂತ್ರ : ಶ್ಲೋಕ 20) ಎಂಬ ಮನ್ನಣೆಗೂ ಅದು ಪಾತ್ರವಾಗಿದೆ.

ಸಂಸ್ಕೃತದ 'ವಹ್ ಪ್ರಾಪಣೇ' ಎಂಬ ಧಾತುವಿನಿಂದ ವಿವಾಹ ಶಬ್ದ ಬಂದಿದೆ. ಹೊಂದುವುದು, ಪಡೆಯುವುದು ಎಂಬುದು ಇದರ ಅರ್ಥ. ಕಾಲಾನುಕ್ರಮಣಿಕೆಯಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯು ಹಲವು ಮೂಲಗಳಿಂದ (ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಹಿತ್ಯಕ) ಅರ್ಥ ವ್ಯಾಪ್ತಿಯನ್ನು ಪಡೆದುಕೊಂಡಿದೆ. ಆದರೆ ಒಂದು ಪ್ರಧಾನ ಅಂಶವಾಗಿ ಕಾಣಬರುವುದು 'ವಿವಾಹ-ಕುಟುಂಬವು ಸಂಪೂರ್ಣವಾಗಿ ಪುರುಷ ನಿರ್ವಚಿತ ಸಂಸ್ಥೆ' ಎಂಬುದಾಗಿದೆ. ಇದರೊಳಗೆ ತಂದೆಯ ಹಕ್ಕು, ಸ್ವಂತ ಆಸ್ತಿ ಮತ್ತು ಆಸ್ತಿಯ ಅನುವಂಶಿಕ ಹಕ್ಕಿನ ನಿರ್ಧಾರಕ್ಕೆ ಏಕಪತ್ನಿ ವ್ಯವಸ್ಥೆಯು ಅತ್ಯಗತ್ಯವಾಗಿದೆ. ಇಲ್ಲದಿದ್ದರೆ ತಂದೆಯ ಉತ್ತರಾಧಿಕಾರಿಯನ್ನು ಗುರುತು ಹಿಡಿಯುವುದು ಕಷ್ಟಕರ. ಆಸ್ತಿಯ ಉತ್ತರಾಧಿಕಾರಿಯನ್ನು ಗುರುತಿಸುವಲ್ಲಿ ಏಕಪತ್ನಿತ್ವ, ಹೆಣ್ಣಿನ ಪಾವಿತ್ರ್ಯ ಮತ್ತು ವಿಧೇಯತೆಯನ್ನು ಮಹತ್ವವೆಂದು ಪರಿಗಣಿಸಿದ್ದವು ಎನ್ನುವುದು ಸ್ಪಷ್ಟ. ಹೀಗಿದ್ದರೂ ಇತಿಹಾಸದ ವಿವರಗಳನ್ನು ಪರಿಶೀಲಿಸಿದಾಗ ಈ ಪದ್ಧತಿ ಹೆಣ್ಣಿನ ಇಚ್ಛೆಗೆ ಅನುಸಾರವಾಗಿಯೇ ಬಂದಿದೆ ಎನ್ನುವುದು ವ್ಯಕ್ತ ವಾಗುತ್ತದೆ. ಪುರುಷರು ಎಲ್ಲ ಕಾಲಗಳಲ್ಲೂ ಗುಂಪು ಮದುವೆಯ ಸೌಲಭ್ಯವನ್ನು ಬಯಸುತ್ತಿದ್ದರು. ಇದು ಈಗಲೂ ಉಳಿದುಕೊಂಡು ಬಂದಿರುವ ದೇವದಾಸಿ, ಬಸವಿ, ವ್ಯಭಿಚಾರ ಮೊದಲಾದ ಪುರುಷ ಪೂರಕ ಸಾಮಾಜಿಕ ಅಭ್ಯಾಸಗಳ ಅಸ್ತಿತ್ವಗಳಿಂದ ಸ್ಪಷ್ಟವಾಗುತ್ತದೆ. ಗುಂಪು ಮದುವೆಗಳು ಚಾಲ್ತಿಯಲ್ಲಿದ್ದ ಪ್ರಾಚೀನ ಕಾಲದಲ್ಲಿ ಮನೆಗೆ ಬಂದ ಅತಿಥಿಗೆ ಹೆಂಡತಿಯನ್ನು ಬಿಡುವ ಪದ್ಧತಿ ಜಾರಿಯಲ್ಲಿತ್ತು. 'ಭಾರ್ಯದಾನ' ದಾನಗಳಲ್ಲೆಲ್ಲಾ ಶ್ರೇಷ್ಠವಾಗಿತ್ತು. ಆದರೆ ಅಪರಿಚಿತನಿಗಿರುವ ಅಸಹ್ಯವಾದ ಅಧಿಕಾರದಿಂದ ಬಿಡುಗಡೆ ಪಡೆಯಲು ಸ್ತ್ರೀಯರು ಏಕಪತ್ನಿತ್ವವನ್ನು ಒತ್ತಾಯಿಸಿರುವ ಪರಿಸ್ಥಿತಿ ವ್ಯಕ್ತವಾಗುತ್ತದೆ. ಚಾರಿತ್ರಿಕವಾಗಿ ಗಮನಿಸಿದರೆ, ಇದು ಆಗ ಬೆಳೆದು ಬರುತ್ತಿದ್ದ ಆಸ್ತಿ ಸಂಬಂಧಗಳಿಗೆ ಮಾರಕವಾಗಿಯೆ ಇತ್ತು. ಏಕ ಪತ್ನಿತ್ವವನ್ನು ಒತ್ತಾಯಿಸಿದ ಸ್ತ್ರೀ ಆಗಂತುಕನ ಅಸಹ್ಯವಾದ ಅಧಿಕಾರದಿಂದ ಬಿಡುಗಡೆ ಹೊಂದಿದ್ದಳು ಎಂಬುದು ನಿಜವಾದರೂ, ಮತ್ತೊಂದು ದೃಷ್ಟಿಯಿಂದ ಸ್ತ್ರೀ ಸಮಾಜದಲ್ಲಿ ಗುಲಾಮಗಿರಿಗೆ ಬಂಧಿತಗೊಂಡಳು. ಏಕಪತ್ನಿತ್ವದ ನೆಲೆಯಿಂದ ಕಂಡು ಬಂದ ಆರ್ಥಿಕ ಸೋಲು ಆಕೆಯನ್ನು ದೈಹಿಕವಾಗಿ ಮತ್ತು ನೈತಿಕವಾಗಿ ಗಂಡಸಿಗೆ ಮತ್ತು ಆಸ್ತಿಗೆ ಬಲಿಯಾಗುವಂತೆ ಮಾಡಿತು.

''ತಾಯಿಯ ಹಕ್ಕಿನ ಉಚ್ಛಾಟನೆ ಮಹಿಳಾ ಜಗತ್ತಿನ ಚಾರಿತ್ರಿಕ ಸೋಲಾಯಿತು. ಮನೆಯ ಆಡಳಿತ ಸೂತ್ರವನ್ನು ಗಂಡಸೇ ಸ್ವಾದೀನಪಡಿಸಿಕೊಂಡ. ಹೆಂಗಸು ಗುಲಾಮಳಾಗಿ, ಗಂಡಸಿನ ಭೋಗದ ವಸ್ತು ಮಾತ್ರವಾಗಿ, ಮಕ್ಕಳನ್ನು ಹೆರುವ ಯಂತ್ರವಾಗಿ ಪರಿವರ್ತನೆಗೊಂಡಳು.'' (Engels : 1889 ; 94) ಎನ್ನುವ ವಿಚಾರ ಇಲ್ಲಿ ಮುಖ್ಯವಾಗುತ್ತದೆ. ಆಸ್ತಿಯ ಹಕ್ಕಿನ ಬಗೆಗ ನಿರ್ದಿಷ್ಟ ನೀತಿ ನಿಯಮಗಳನ್ನು ರೂಪಿಸಿದ ಸ್ಮೃತಿಕಾರರು ಹೆಂಗಸರ ಭಾವನೆಗಳಿಗಾಗಲಿ, ವ್ಯಕ್ತಿತ್ವಗಳಿಗಾಗಲಿ ಯಾವುದೇ ರೀತಿಯ ಮನ್ನಣೆಯನ್ನು ನೀಡಿರಲಿಲ್ಲ. ಅವರಿಗೆ ಸ್ತ್ರೀಯರಲ್ಲಿ ಹುಟ್ಟುವ ಮಕ್ಕಳು ಮಾತ್ರ ಮುಖ್ಯರಾಗಿದ್ದರು. ಮಗನ ಹಕ್ಕುಗಳ ಬಗ್ಗೆ ಮಹಾಭಾರತದ ಅನುಶಾಸನ ಪರ್ವದಲ್ಲಿ ಒಂದು ಚರ್ಚೆಯ ಪ್ರಸಂಗವಿದೆ. ಅದರಲ್ಲಿ ಯುಧಿಷ್ಠಿರನು ಒಂದು ಮಹತ್ವದ ಪ್ರಶ್ನೆಯನ್ನು ಮುಂದಿಡುತ್ತಾನೆ. ಕೆಲವರು ತಾಯಿಯ ಮಕ್ಕಳನ್ನೇ ನಿಜವಾದ ಮಕ್ಕಳೆಂದೂ, ಇನ್ನು ಕೆಲವರು ತಂದೆಯ ಮಕ್ಕಳು ಮಾತ್ರ ನಿಜವಾದ ಮಕ್ಕಳೆಂದೂ ಹೇಳುತ್ತಾರೆ. ಈ ಎರಡೂ ರೀತಿಯ ಮಕ್ಕಳೂ ಸಮಾನರೆ ? ನಿಜವಾಗಿ ಮಕ್ಕಳು ಯಾರಿಗೆ ಸೇರಬೇಕಾದವರು. (ಮಹಾಭಾರತ ಅನುಶಾಸನ ಪರ್ವ ಶ್ಲೋಕ 126). ಯುಧಿಷ್ಠಿರನ ಪ್ರಶ್ನೆಗೆ ಯಾರ ಬೀಜದಿಂದ ಹುಟ್ಟಿದ್ದಾನೋ ಅವನಿಗೇ ಆ ಮಗನು ಸೇರುತ್ತಾನೆ ಎನ್ನುವ ಉತ್ತರವಿದೆ. (ಶ್ಲೋಕ 127) ಹೆಂಗಸನ್ನು ತನ್ನ ಆಸ್ತಿಗೆ ಉತ್ತರಾಧಿಕಾರಿಯನ್ನು ಪಡೆಯಲು ಒಂದು ಯಂತ್ರವಾಗಿ ಪರಿಗಣಿಸುವುದು ಇಲ್ಲಿ ವ್ಯಕ್ತವಾಗುತ್ತದೆ. ಅಂದರೆ 'ಪಿತೃನಿಷ್ಠ' ಸಂಸ್ಕೃತಿಯನ್ನು ಇಲ್ಲಿ ಅತಿ ನಿಖರವಾಗಿ ಗುರುತಿಸಬಹುದು. ಒಂದು ವೇಳೆ ನಿಜವಾದ ತಂದೆಯು ಆತನ ಮಗನನ್ನು ತಿರಸ್ಕರಿಸಿದರೆ ಆಗ ಮಗನು ತನ್ನ ತಾಯಿಯ ಗಂಡನ ಮಗನೇ ಆಗುತ್ತಾನೆ. ಗುಂಪು ಮದುವೆ ಮತ್ತು ಒಬ್ಬನಿಗೊಬ್ಬಳು ವ್ಯವಸ್ಥೆಯಲ್ಲಿ ಮಕ್ಕಳು ಅವರ ತಾಯಿಗೆ ಸಂಬಂಧಿಸಿದ್ದರು. ತಂದೆ ತಾಯಿಯನ್ನು ಬಿಟ್ಟಾಗ ಮಕ್ಕಳು ಸಹಜವಾಗಿ ತಾಯಿಯಲ್ಲಿ ಉಳಿಯುತ್ತಿದ್ದರು. ಮಹಾಭಾರತದ ಪಾಂಡವರ ಸಂದರ್ಭ ಇದಕ್ಕೆ ಒಂದು ನಿದರ್ಶನ.

ಗುಲಾಮಗಿರಿಯಲ್ಲಿ ಹೆಂಗಸರನ್ನು ಕೊಂಡುಕೊಳ್ಳುವುದು, ಮಾರುವುದು ಮತ್ತು ಬಾಡಿಗೆಗೆ ಕೊಡುವುದು ಬಳಕೆಯಲ್ಲಿತ್ತು. ಸ್ವಂತ ಹೆಂಡತಿಯಲ್ಲಿ ಹುಟ್ಟಿದ ಮಕ್ಕಳು ಆಸ್ತಿಯ ಉತ್ತರಾಧಿಕಾರಿಗಳೂ, ಗುಲಾಮ ಹೆಂಗಸರಲ್ಲಿ ಹುಟ್ಟಿದ ಮಕ್ಕಳು ಸಂಪತ್ತನ್ನು ಹೆಚ್ಚಿಸುವ ಕೆಲಸಗಾರರಾಗುವುದು ಕಂಡುಬರುತ್ತದೆ. ಹೆಂಡತಿ ಯನ್ನು ಮಾತ್ರವಲ್ಲದೆ, ಹೆಣ್ಣು ಮಕ್ಕಳನ್ನೂ ಸಹ ಇದೇ ದೃಷ್ಟಿಯಿಂದ ನೋಡಲಾಗಿದೆ. ಮಹಾಭಾರತದ ಉದ್ಯೋಗ ಪರ್ವದಲ್ಲಿ ಬರುವ ಋಷಿಯಾದ ಗಾಲವನ ಕಥೆಯಲ್ಲಿ ಹೆಣ್ಣು ಮಕ್ಕಳನ್ನು ಹೇಗೆ ಬಾಡಿಗೆಯ ಮೇಲೆ ಕೊಡುತ್ತಿದ್ದರು ಎನ್ನುವುದನ್ನು ವಿವರಿಸಿದೆ. ಇಲ್ಲಿ ಗಾಲವನು ಗುರುಗಳಿಗೆ ಗುರುದಕ್ಷಿಣೆ ಕೊಡಲು ತನ್ನಲ್ಲಿ ಹಣವಿಲ್ಲದೆ ಯಯಾತಿಯನ್ನು ಯಾಚಿಸುತ್ತಾನೆ. ಯಯಾತಿಯು ಆತನ ಮಗಳಾದ ಮಾಧವಿಯನ್ನು ಆತನಿಗೆ ದಾನವಾಗಿ ಕೊಡುತ್ತಾನೆ. ಗಾಲವನು ಮಾಧವಿಯನ್ನು ಕ್ರಮವಾಗಿ ಮೂರು ಜನ ರಾಜರಲ್ಲಿ ಒತ್ತೆಯಿಟ್ಟು ಅವರಿಂದ ತಲಾ 200 ಕುದುರೆಗಳನ್ನು ಪ್ರತಿಫಲವಾಗಿ ಪಡೆಯುತ್ತಾನೆ. ಪ್ರತಿಯೊಬ್ಬರೂ ಅವಳನ್ನು ಅನುಭವಿಸಿ ಒಂದೊಂದು ಮಗು ಪಡೆದು ಪುನಃ ಗಾಲವನಿಗೆ ಒಪ್ಪಿಸುತ್ತಾರೆ. ಗಾಲವನು ಅವಳನ್ನು, ಕುದುರೆಗಳನ್ನು ಮತ್ತು ಒಟ್ಟಾದ ಎಲ್ಲಾ ಸಂಪತ್ತನ್ನು ಗುರುಕಾಣಿಕೆಯಾಗಿ ಕೊಟ್ಟು ಅವನ ಬಾಕಿ ತೀರಿಸುತ್ತಾನೆ. ಗುರು ವಿಶ್ವಾಮಿತ್ರರು ಕೂಡ ಅವಳಲ್ಲಿ ಒಂದು ಮಗುವನ್ನು ಪಡೆದು

ಮರಳಿ ಗಾಲವನಿಗೆ ಹಿಂದಿರುಗಿಸುತ್ತಾನೆ. ಕೊನೆಗೆ ಗಾಲವನು ಮಾಧವಿಯನ್ನು ಯಯಾತಿಗೆ ಒಪ್ಪಿಸುತ್ತಾನೆ. ಇಷ್ಟು ಸಮಯದ ಗುಲಾಮಗಿರಿಯ ನಂತರದಲ್ಲಿ ತಂದೆಯು ಸ್ವಯಂವರ ಪದ್ಧತಿಯಿಂದ ಅವಳ ಮದುವೆ ಮಾಡಲು ಯೋಚಿಸುತ್ತಾನೆ. ಇದಕ್ಕೆ ರಾಜರು, ಶ್ರೀಮಂತರು, ಯುವಕರು ಬರುತ್ತಾರೆ. ಆದರೆ ಈ ಕಾಲಕ್ಕಾಗಲೇ ಮಾಧವಿಯು ಜೀವನದ ಬಗ್ಗೆ, ಗಂಡಸಿನ ಗುಲಾಮಳಾಗಿರುವ ಬಗ್ಗೆ ಸಾಕಷ್ಟು ಜುಗುಪ್ಸೆಯನ್ನು ಹೊಂದಿದವಳಾಗಿ, ಸ್ವಯಂವರಕ್ಕೆ ಬಂದ ಎಲ್ಲರನ್ನೂ ತಿರಸ್ಕರಿಸಿ ಕಾಡಿಗೆ ಹೋಗುತ್ತಾಳೆ. ಅಲ್ಲಿ ಅವಳು ಪುರುಷ ಸಮಾಜದ ದುಷ್ಟ ಹಿಡಿತದಿಂದ ಪಾರಾಗಲು ದೇವರನ್ನು ಪ್ರಾರ್ಥಿಸುತ್ತಾಳೆ. (ಮಹಾಭಾರತ: ಉದ್ಯೋಗಪರ್ವ - 120).

ಪಿತೃವಿನ ಅಧಿಕಾರ ವ್ಯಾಪ್ತಿ ಪತ್ನಿಯನ್ನು, ಮಗಳನ್ನು ಮತ್ತು ಮಕ್ಕಳನ್ನು ಒತ್ತೆ ಇಡುವುದಕ್ಕೆ ಮಾತ್ರ ಸೀಮಿತಗೊಂಡಿರಲಿಲ್ಲ. ಬದಲಾಗಿ ಅವರ ಜೀವನದ ಮೇಲೂ ಪರಿಪೂರ್ಣವಾದ ಅಧಿಕಾರ ಸ್ಥಾಪಿಸುತ್ತದೆ. ಇಚ್ಛೆ ಬಂದಾಗ ಅವರನ್ನು ಮಾರುವಂತೆ ಕೊಲ್ಲುವ ಅಧಿಕಾರವೂ ಪುರುಷನಿಗಿತ್ತು. ಗುಲಾಮಗಿರಿಯ ನೀತಿನಿಯಮಗಳನ್ನು ಒಳಗೊಂಡ ಪಿತೃಸತ್ತೆಯ ವ್ಯವಸ್ಥೆಯ ಒಳಗೆ ಹೆಂಡತಿ, ಮಕ್ಕಳು, ಗುಲಾಮರನ್ನು ಆಸ್ತಿಯೆಂಬಂತೆ ಪರಿಗಣಿಸುವುದರ ಮೂಲಕವಾಗಿ ಪುರುಷ ಅವರ ಮೇಲೆ ಸರ್ವಸ್ವಾಮ್ಯ ವನ್ನು ಸಾಧಿಸಿರುವುದು ಕಂಡುಬರುತ್ತದೆ. ಇಲ್ಲಿ ಸ್ತ್ರೀಯರು ಹಳೆಯ ಸ್ಥಾನಮಾನಗಳಿಗಾಗಿ ಸಾಕಷ್ಟು ಹೋರಾಟ ನಡೆಸಿದ್ದಾರೆ ಎಂಬುದು ಗಮನಾರ್ಹ ವಿಚಾರ. ಹಾಗಾಗಿಯೇ ಗುಲಾಮಗಿರಿ ಪಿತೃ ವ್ಯವಸ್ಥೆಯ ಒಳಗೆ ಕೂಡ ಕೆಲವು ಹಳೆಯ ಪದ್ಧತಿಗಳು ಉಳಿದುಬಂದವು. ಆದರೆ ಸ್ತ್ರೀಯರ ಹೋರಾಟವನ್ನು ಗುಲಾಮರ ಯಜಮಾನನಾದ ಪುರುಷ ಸಾಕಷ್ಟು ಕ್ರೂರವಾಗಿಯೇ ಹತ್ತಿಕ್ಕಿರುವುದು ವ್ಯಕ್ತವಾಗುತ್ತದೆ. ಇದನ್ನು ಸ್ಪಷ್ಟಪಡಿಸಿಕೊಳ್ಳುವ ಸಲುವಾಗಿ ಮಹಾಭಾರತದಲ್ಲಿ ಬರುವ ಮೂರು ಪ್ರಮುಖ ಪ್ರಸಂಗಗಳನ್ನು ಗಮನಿಸುವುದು ಅನಿವಾರ್ಯವಾಗುತ್ತದೆ. ಅವುಗಳೆಂದರೆ, 1) ಸುದರ್ಶನ-ಜಘವತಿ, 2) ಗೌತಮ- ಗೌತಮಿ ಮತ್ತು 3) ಜಮದಗ್ನಿ-ರೇಣುಕೆಯರ ವೈವಾಹಿಕ ಸ್ವರೂಪಗಳು. ಇವು ಗೋತ್ರ ಪದ್ಧತಿಯಲ್ಲಿದ್ದ ನೀತಿ ನಿಯಮಗಳು ಪಿತೃನಿಷ್ಠ ಗುಲಾಮ ಪದ್ಧತಿಗೆ ಬಂದಾಗ ಹೇಗೆ ಬದಲಾದವು ಎಂಬುದನ್ನು ಅವುಗಳ ವಿವರಣೆಯ ಒಡಲೊಳಗೆ ಅನಾವರಣ ಗೊಳಿಸುತ್ತವೆ.

1) ಒಮ್ಮೆ ಸುದರ್ಶನ ಋಷಿ ಆತನ ಹೆಂಡತಿಯನ್ನು ಆಶ್ರಮದಲ್ಲೇ ಬಿಟ್ಟು ಹೋದಾಗ ಓರ್ವ ಬ್ರಾಹ್ಮಣ ಆಗಂತುಕ ಆಶ್ರಮಕ್ಕೆ ಬರುತ್ತಾನೆ. ಅವನಿಗೆ ಉಟೋಪಚಾರಗಳನ್ನು ಮಾಡಿದುದಲ್ಲದೆ ಗಣ ಗೋತ್ರಪದ್ಧತಿಯ ಪ್ರಕಾರ ಅವನ ಇಚ್ಛೆಯಂತೆ ಜಘವತಿಯು ಬ್ರಾಹ್ಮಣನ ಜತೆ ಮಲಗಿ ರಾತ್ರಿ ಕಳೆಯುತ್ತಾಳೆ. ಸುದರ್ಶನ ಮುನಿಯು ಹಿಂದಿರುಗಿ ಬಂದು ಈ ಬಗ್ಗೆ ತಿಳಿದು ಆತನ ಹೆಂಡತಿಯು ಸರಿಯಾದ ಗೃಹಿಣಿ ಧರ್ಮವನ್ನು ಪಾಲಿಸಿದಳು ಎನ್ನುವುದಕ್ಕಾಗಿ ಸಂತೋಷಗೊಳ್ಳುತ್ತಾನೆ. ಈ ಘಟನೆ, ಗಣಗಳು ಒಡೆದು ಬೇರೆ ಬೇರೆ ಕಡೆ ಸ್ವತಂತ್ರ ಕುಟುಂಬಗಳಾಗಿ ನೆಲೆಯೂರಿದ ಸಮಯಕ್ಕೆ ಸಂಬಂಧಪಟ್ಟದ್ದು ಎಂಬುದು ಆ ಕಾಲದ ಮನೋಧರ್ಮದ ಹಿನ್ನೆಲೆಯಲ್ಲಿ ವ್ಯಕ್ತವಾಗುವ ವಿಚಾರವಾಗಿದೆ. ಪೂರ್ವದ 'ಗುಂಪು ಮದುವೆ' ಯನ್ನು ವಿರೋಧಿಸಿ ಸ್ತ್ರೀ ಒಂದೇ ಪುರುಷನ ಜೊತೆಗೆ ಬದುಕುವ ನಿರ್ಧಾರ ಮಾಡಿದ್ದು ಸಾಮಾನ್ಯವಾಗಿ ಇದೇ ಕಾಲದಲ್ಲಿ. ಈ ಸಂಕ್ರಮಣ ಸ್ಥಿತಿಯ ತಲ್ಲಣಗಳು ಸುದರ್ಶನನ ಮೂಲಕ ಅಭಿವ್ಯಕ್ತವಾಗಿವೆ. ಆತನ ಹೆಂಡತಿ ಅತಿಥಿಯ ಜತೆ ಮಲಗದೆ ಎಲ್ಲಿ ಅತಿಥೇಯಳ ಧರ್ಮವನ್ನು ಮುರಿಯುತ್ತಾಳೋ ಎಂದು ಸುದರ್ಶನನು ಭೀತನಾಗುತ್ತಾನೆ. ಅಲ್ಲದೆ, ಆತನ ಹೆಂಡತಿ ಹಿಂದಿನ ಕಾಲದ ಗುಣಧರ್ಮಗಳಿಗನುಗುಣವಾಗಿ ಅತಿಥಿಯನ್ನು ಸಂತೋಷಗೊಳಿಸಿದುದಕ್ಕಾಗಿ ಸಮಾಧಾನ ಹೊಂದುತ್ತಾನೆ.

2) ಗೌತಮ-ಗೌತಮಿಯರ ಸಂದರ್ಭದಲ್ಲಿ ಇದೇ ಸನ್ನಿವೇಶ ಎದುರಾದಾಗ ಕಾಲ ಸಾಕಷ್ಟು ಮಾರ್ಪಟ್ಟಿದೆ. ಗೌತಮನ ಹೆಂಡತಿ ಗಂಡನಿಲ್ಲದ ವೇಳೆಯಲ್ಲಿ ಅತಿಥಿಯಾದ ಇಂದ್ರನನ್ನು ಕೂಡುತ್ತಾಳೆ. ಇದನ್ನು ತಿಳಿದ ಗೌತಮ ಸಿಟ್ಟಾಗಿ ಮಗ ಚಿರಕಾರಿಯನ್ನು ಕರೆದು ತಾಯಿಯನ್ನು ಕೊಲ್ಲಲು ಹೇಳಿ ಹೋಗುತ್ತಾನೆ. ಚಿರಕಾರಿಗೆ ದೊಡ್ಡ ಧರ್ಮಸಂಕಟ ಎದುರಾಗುತ್ತದೆ. ಹಳೆ ಪದ್ಧತಿಯ ಪ್ರಕಾರ ಆತನ ತಾಯಿಯ ವರ್ತನೆ ಅಪರಾಧವಲ್ಲ. ಆದ್ದರಿಂದ ಅವಳನ್ನು ಕೊಲ್ಲುವುದು ಮಹಾಪರಾಧವಾಗುತ್ತದೆ. ಆದರೆ ಹೊಸ ಕಾಲದ ಹೊಸ ವರ್ಗ ಸಂಬಂಧಗಳ ಮತ್ತು ಕುಟುಂಬ ವ್ಯವಸ್ಥೆಯ ಕಾನೂನುಗಳ ಪ್ರಕಾರ ತಂದೆಯ ಆಜ್ಞೆಯನ್ನು ಪಾಲಿಸ ಬೇಕಾಗುತ್ತದೆ. ದೀರ್ಘ ಆಲೋಚನೆಯಲ್ಲಿ ಚಿರಕಾರಿ ತಂದೆಗಾಗಿ ಕಾದು ಆತನ ಬರುವಿಕೆಯ ನಂತರದಲ್ಲಿ ಪರಿಸ್ಥಿತಿಯನ್ನು ವಿವರಿಸುತ್ತಾನೆ. ತಾಯಿ-ಮಗ ಗೆಲ್ಲುತ್ತಾರೆ. ಸೂಕ್ಷ್ಮವಾಗಿ ಸಂದರ್ಭವನ್ನು ಅವಲೋಕಿಸಿದರೆ, ಗೌತಮಿ ಚಿರಕಾರಿಯ ಗೆಲುವಿಗೆ ಕಾರಣ ಕಾನೂನಿನ ಬೆಂಬಲವಲ್ಲ. ಬದಲಾಗಿ ಹೊಸ ಕಾನೂನು ಆಗಿನ್ನೂ ಸಮಾಜದಲ್ಲಿ ಪರಿಣಾಮಕಾರಿಯಾಗಿ ಬೇರೂರಿರಲಿಲ್ಲ. ಇದೂ ಕೂಡ ಸಂಕ್ರಮಣ ಕಾಲದ ದ್ವಂದ್ವತೆಗೆ ನಿದರ್ಶನವೇ ಆಗಿ ಕಾಣಿಸಿಕೊಳ್ಳುತ್ತದೆ.

3) ಜಮದಗ್ನಿ ರೇಣುಕೆಯರ ಪ್ರಸಂಗದಲ್ಲಿ ಅದೇ ಸನ್ನಿವೇಶ ಭಿನ್ನ ಪರಿಣಾಮಕ್ಕೆ ಕಾರಣವಾಗುತ್ತದೆ. ರೇಣುಕೆಯು ಚಿತ್ರಕಥನೆಂಬ ಗಂಧರ್ವನ ಮೇಲೆ ಮೋಹಗೊಂಡಳು ಎಂಬ ಕಾರಣಕ್ಕಾಗಿ ಜಮದಗ್ನಿ ಅವಳನ್ನು ಶಿಕ್ಷಿಸುತ್ತಾನೆ. ಮಗ ಪರಶುರಾಮ ತಂದೆಯ ಶಿಕ್ಷಾ ಆಜ್ಞೆಯಂತೆ ತಾಯಿಯನ್ನು ಕೊಲೆ ಮಾಡುತ್ತಾನೆ. ಹೆಂಡತಿಯ

ಜೀವನದ ಮೇಲಿನ ಸಂಪೂರ್ಣ ಹಕ್ಕು ಪುರುಷ ಸಾಧಿಸಿಕೊಂಡಿರುವುದು ಈ ಕಾಲಘಟ್ಟದಲ್ಲಿಯೇ ಇರಬೇಕು ಎನ್ನುವ ಅಂಶ ಸ್ಪಷ್ಟವಾಗುತ್ತದೆ. ಇದರಲ್ಲಿ ಸ್ತ್ರೀಯಾದವಳ ಸ್ವಂತವಾದ ಅಸ್ತಿತ್ವಕ್ಕಾಗಲಿ, ಭಾವನೆಗಳಿಗಾಗಲಿ ಯಾವುದೇ ಮಾನ್ಯತೆ ಇಲ್ಲ. ಸಾಮಾಜಿಕ ಭದ್ರತೆ ಇಲ್ಲ. ಅತಿ ಕ್ರೂರವಾದ ಸರ್ವಾಧಿಕಾರಿ ಪುರುಷನ ಅಧೀನದಲ್ಲಿ ಅಸ್ತಿತ್ವ, ಸ್ವಾತಂತ್ರ್ಯ ನಿರಸನಗೊಂಡು ಬದುಕುವ ಸ್ತ್ರೀಯರ ನಿದರ್ಶನದ ಪ್ರತೀಕವಾಗಿ, ಪ್ರತಿಮೆಯಾಗಿ ರೇಣುಕೆಯ ಕಥೆ ಕಾಣಿಸಿ ಕೊಳ್ಳುತ್ತದೆ.

ಈ ಮೂರು ಪೌರಾಣಿಕ ಸನ್ನಿವೇಶಗಳು ಸ್ವಂತ ಆಸ್ತಿಪದ್ಧತಿ, ಕುಟುಂಬ ವ್ಯವಸ್ಥೆಯ ಬೆಳವಣಿಗೆ ಮತ್ತು ಅನುಕ್ರಮವಾಗಿ ಪುರುಷನ ಪ್ರಾಬಲ್ಯತೆಯನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಬಯಲು ಗೊಳಿಸುತ್ತದೆ. ಶತಮಾನಗಳ ಕಾಲದ ವೇಗ ಇದರೊಳಗೆ ಇದ್ದರೂ, ಆಧುನಿಕ ಇಂಡಿಯಾದ ಶೋಷಿತ ಮಹಿಳೆ ಈ ದೇಶದ ವರ್ಣ ವರ್ಗ ಸಮಾಜದ ಕ್ರೂರ ದಬ್ಬಾಳಿಕೆಯ ಹಿನ್ನೆಲೆಯಿಂದ ಬಂದವಳು ಎಂಬುದು ಅನಾವರಣಗೊಳ್ಳುತ್ತದೆ. ಸ್ವಂತ ಆಸ್ತಿಯ ಉದಯದೊಂದಿಗೆ ಕಾಣಿಸಿಕೊಂಡ ವರ್ಣ ವ್ಯವಸ್ಥೆಯ ಒಳಗಿನ ಜಾತಿ, ಉಪಜಾತಿ ವಿಂಗಡಣೆಗಳಲ್ಲಿ ಆಸ್ತಿಯ ಕೂಡಿಡುವಿಕೆಯಿಂದ ಉಂಟಾದ ವರ್ಗ ಸಂರಚನೆ ಇವೆಲ್ಲವುಗಳಿಂದ ಹೆಂಗಸಿನ ಮನೆಗೆಲಸಕ್ಕೆ ಯಾವುದೇ ಸಾಮಾಜಿಕ ಮೌಲ್ಯವಿರದಿದ್ದ ಒಂದು ಕುಟುಂಬ ವ್ಯವಸ್ಥೆ ಹುಟ್ಟುಪಡೆದಿದೆ. ಇದರೊಳಗೆ ಹೆಂಗಸು ಶೂದ್ರ ಗುಲಾಮರಂತೆ ಸ್ವಾತಂತ್ರ್ಯ ಕಳೆದುಕೊಂಡಿರುವುದು ವ್ಯಕ್ತವಾಗುತ್ತದೆ. ಶತಮಾನಗಳ ಬಳಿಕ ಗುಲಾಮಗಿರಿಯೂ ಕಡಿಮೆಯಾಗಿ ಆಸ್ತಿ ವ್ಯವಸ್ಥೆ, ಉತ್ಪಾದನಾ ವ್ಯವಸ್ಥೆ ಪಲ್ಲಟಗೊಂಡ ಪರಿಣಾಮದಿಂದ ಊಳಿಗ ಮಾನ್ಯಪದ್ಧತಿ ಜಾರಿಗೊಂಡಿದೆ. ಈ ವ್ಯವಸ್ಥೆಯ ಒಳಗೂ ಸ್ತ್ರೀಯರು ಹುಟ್ಟಿನಿಂದ ಸಾವಿನವರೆಗೆ ಜೀತದಾಳುಗಳಾಗಿ ಬದುಕುವುದು ಅನಿವಾರ್ಯವಾಗಿದೆ. ಇದಕ್ಕೆ ಮುಖ್ಯಕಾರಣ ಕುಟುಂಬ ವಿವಾಹ ನೆಲೆಯಿಂದ ಕಾಣಿಸಿಕೊಳ್ಳುವ ಆರ್ಥಿಕ ಪರಾವಲಂಬನೆ. ಸ್ತ್ರೀಯರ ಆರ್ಥಿಕ ಅಧೀನತೆಯು ಪುರುಷ ಸಂಸ್ಕೃತಿಯ ಅಧಿಕಾರ ದಬ್ಬಾಳಿಕೆಯನ್ನು ಸದಾ ಮಾನ್ಯ ಮಾಡುವಂಥಾದ್ದಾಗಿದೆ. ಕೊನೆಗೆ ವಸಾಹತು-ವಸಾಹತ್ತೋತ್ತರ ಬಂಡವಾಳಶಾಹಿಯ ಒಳಗೆ ಕೂಡ ಇಂಡಿಯಾದ ಸ್ತ್ರೀಯರ ಜೀತದ ಮುಂದುವರಿಕೆ ಜೊತೆಗೆ, ಕೂಲಿಗಳಾಗಿ ಪರಿವರ್ತನೆ ಹೊಂದಿದ ಪಲ್ಲಟವನ್ನು ನಿಖರವಾಗಿ ಗುರುತಿಸಬಹುದು.

## ಶಾಪಗ್ರಸ್ತ - ಗಾಂಧಾರಿ

ಗಾಂಧಾರಿ! ನೀನೇಕೆ
ಕಣ್ಣಿಗೆ ಪಟ್ಟಿ ಕಟ್ಟಿಕೊಂಡೆ?
ಸುಂದರ ಜಗತ್ತನ್ನು ನೋಡದೇ
ಕಣ್ಣ ಕಟ್ಟಿ ಕತ್ತಲ ಗವಿ
ನಿನ್ನ ಬದುಕಿನ ಬೆಳಕಿಂಡಿಯಲ್ಲೆ?
ಬೆಳಕು ಕಾಣದಂತೆ ಕದ ಮುಚ್ಚಿ
ಅಗಳಿ ಜಡಿದಿದೆಯಲ್ಲೇ
ಕತ್ತಲು ಮಾಡಿಕೊಂಡೆಯಲ್ಲೇ?
ನಕ್ಷತ್ರಗಳಂತೆ ಹೊಳೆವ ಕಣ್ಣುಗಳ
ಕತ್ತಲೆಯ ಕೂಪವಾಗಿಸಿದ್ದು
ಯಾವ ಸಾಧನೆಯೆ?
ಸೂರ್ಯ, ಚಂದ್ರ, ನಕ್ಷತ್ರ
ಸುಂದರ ಸಮುದ್ರದ
ಸ್ವರ್ಗ ದರ್ಶನವನ್ನು
ನೀನೇಕೆ ಪಡೆಯಲಿಲ್ಲವೆ?
ಇತಿಹಾಸದ ಪುಟ ತಿರುವಿ ನೋಡಿದೆ
ನೀನು ತ್ಯಾಗ ಮಾಡಿದ್ದೆ
ನಿನಗಾಗಿ ತ್ಯಾಗ ಮಾಡಿದ
ಒಬ್ಬರನ್ನೂ ಕಾಣಲಿಲ್ಲವಲ್ಲೇ
ಎಂದಾದರೊಂದು ದಿನ
ಬಾಳ ತಿರುವಿನಲಿ ನಿಂತು
ತಿರುಗಿ ನೋಡು ಗಾಂಧಾರಿ
ಆಗ ಹೇಳು ನನಗೆ
ನೀನು ಮಾಡಿದ್ದು ಸರಿಯೇ?
ಹೇಳಲಾರೆ ಸ್ವಾರ್ಥಿಯಾಗಲು
ಜವಾಬ್ದಾರಿ ಬೇಡವೇನೆ?

ಕೆ. ಷರೀಫಾ

# ಒಂದು ಕಿವಿ ಮಾತು

ಮಹಿಳೆಯರ ಮೇಲೆ ಎಸಗಲಾಗುತ್ತಿರುವ ಅಪರಾಧಗಳು / ದೌರ್ಜನ್ಯಗಳು ಹೆಚ್ಚುತ್ತಿವೆಯೇ ? ಹೌದು.... ಹೌದು.... ಎಂದು ನಾವು ನೀವೆಲ್ಲಾ ಹೇಳಿದರೆ, "ಛೆ ಛೆ ಇಲ್ಲ.. ಸ್ವಲ್ಪ ಕಡಿಮೆಯಂತೂ ಆಗಿದೆ" ಎನ್ನುತ್ತಾರೆ ವಿಮಲಾ ಮೆಹ್ತಾ. "ಇತ್ತೀಚಿನ ವರ್ಷಗಳಲ್ಲಂತೂ ಈ ಅಪರಾಧಗಳು ಕಡಿಮೆ ಆಗುತ್ತಿವೆ. ವಿಮೆನ್ಸ್ ಕ್ರೈಮ್ ಸೆಲ್ ಈ ವಿಷಯದಲ್ಲಿ ಸಾಕಷ್ಟು ಕ್ರಮಗಳನ್ನು ತೆಗೆದುಕೊಂಡಿದೆ" ಎನ್ನುತ್ತಾರೆ ವಿಮಲಾ ಮೆಹ್ತಾ.

ವಿಮಲಾ ಮೆಹ್ತಾ ದೆಹಲಿಯ ಜಂಟಿ ಪೊಲೀಸ್ ಕಮೀಷನರ್ ಆಗಿದ್ದಾರೆ. ರಾಷ್ಟ್ರಪತಿಗಳ ಪೋಲೀಸ್ ಪದಕವೂ ಸೇರಿದಂತೆ ಅನೇಕ ಪ್ರಶಸ್ತಿಗಳನ್ನು ಅವರು ಗಳಿಸಿದ್ದಾರೆ. ವಿದೇಶಗಳಲ್ಲಿಯೂ ಅನೇಕ ಕೋರ್ಸುಗಳನ್ನು ಮಾಡಿದ್ದಾರೆ. ಇಲ್ಲಿ ವಿವಿಧ ಹುದ್ದೆಗಳನ್ನು ನಿಭಾಯಿಸಿದ್ದಾರೆ. ಮಹಿಳೆಯರ ಮೇಲಿನ ದೌರ್ಜನ್ಯ, ಶೋಷಣೆಗಳು ಕಡಿಮೆಯಾಗಬೇಕೆಂದರೆ ಅವರು ಮೊದಲು ಆತ್ಮವಿಶ್ವಾಸ ಬೆಳೆಸಿಕೊಳ್ಳಬೇಕೆಂದು ಅವರು ಹೇಳುತ್ತಾರೆ. ಈ ನಿಟ್ಟಿನಲ್ಲಿ ವಿಮೆನ್ಸ್ ಕ್ರೈಮ್ ಸೆಲ್ ಸಹ ಸಹಾಯ ಮಾಡುತ್ತಿದೆ. ಶಾಲಾ ಕಾಲೇಜು ವಿದ್ಯಾರ್ಥಿನಿಯರಿಗೆ ಆತ್ಮರಕ್ಷಣೆಯ ಕೌಶಲ್ಯ ಗಳನ್ನು ಕಲಿಸುತ್ತಿದೆ. ಈವರೆಗು ದೆಹಲಿಯಲ್ಲಿ ಸುಮಾರು 95 ಶಾಲಾ-ಕಾಲೇಜುಗಳು ಈ ಸೌಲಭ್ಯದ ಪ್ರಯೋಜನ ಪಡೆದಿದೆ. 16 ರಿಂದ 60 ವಯಸ್ಸಿನ ವಯೋಮಾನದ ಸುಮಾರು 8000 ಮಹಿಳೆಯರು ತರಬೇತಿ ಹೊಂದಿದ್ದಾರೆ. ಹುಡುಗಿ/ಮಹಿಳೆ ಯರನ್ನು ಚುಡಾಯಿಸುವುದು ದೊಡ್ಡ ನಗರಗಳಲ್ಲಂತೂ ಒಂದು ದೊಡ್ಡ ಸಮಸ್ಯೆಯೇ ಆಗಿದೆ. ಆದರೆ ಈ ಬಗ್ಗೆ ಅವರು ದೂರು ಕೊಡದಿರುವುದೂ ಸಹ ಮತ್ತೊಂದು ಸಮಸ್ಯೆಯಾಗಿದೆ ಎನ್ನುತ್ತಾರೆ ವಿಮಲಾ ಮೆಹ್ತಾ. ಯಾವುದೇ ಕ್ಲಿಷ್ಟಕರ ಸನ್ನಿವೇಶ ಗಳಲ್ಲಿಯೂ ತಮ್ಮನ್ನು ತಾವು ರಕ್ಷಿಸಿಕೊಳ್ಳುವ ಸಾಮರ್ಥ್ಯ ಮಹಿಳೆಯರಿಗಿದೆ. ಅದನ್ನು ಅವರು ಗುರುತಿಸಿಕೊಳ್ಳಬೇಕು. ಆ ಬಗ್ಗೆ ವಿಶ್ವಾಸ ಮೂಡಿಸಿಕೊಳ್ಳಬೇಕು ಎಂಬ ಕಿವಿಮಾತನ್ನು ಅವರು ಮಹಿಳೆಯರಿಗೆ ನೀಡುತ್ತಾರೆ.

ವಿಮೆನ್ಸ್ ಕ್ರೈಮ್ ಸೆಲ್‌ನ ಕೆಲಸ ಬೀದಿ ಬದಿಯ ರೋಮಿಯೋಗಳನ್ನು ಹತ್ತಿಕ್ಕುವುದು ಮಾತ್ರವಲ್ಲ, ಮಹಿಳೆಯರ ಮೇಲಾಗುವ ದೌರ್ಜನ್ಯಗಳಿಗೇನು ಬರವೇ ? ವರದಕ್ಷಿಣೆ ಸಾವುಗಳ ಪ್ರಕರಣಗಳು ಸೇರಿದಂತೆ ಇವೆಲ್ಲವೂ ಸೆಲ್‌ನ ಸುಪರ್ದಿಗೆ ಬರುತ್ತವೆ.

ವಿಮಲಾ ಮೆಹ್ತಾ ಮಹಿಳೆಯರಿಗೆ ಈ ಮಾತುಗಳನ್ನು ಒತ್ತಿ ಒತ್ತಿ ಹೇಳುತ್ತಾರೆ :

1. ದೌರ್ಜನ್ಯಗಳನ್ನು ಸಹಿಸಬೇಡಿ. ದೂರು ಕೊಡಿ.
2. ಆತ್ಮರಕ್ಷಣೆಯ ಕೌಶಲ್ಯಗಳನ್ನು ಕಲಿಯಿರಿ. ಒಬ್ಬಂಟಿಯಾಗಿ ಪ್ರಯಾಣ ಮಾಡುವವರಂತೂ ಕಲಿಯಲೇ ಬೇಕು.
3. ಯಾವುದೇ ಸನ್ನಿವೇಶದಲ್ಲಿ ಅಂಜದಿರಿ. ಆತ್ಮವಿಶ್ವಾಸ ಕಳೆದುಕೊಳ್ಳಬೇಡಿ.
4. ಆಕ್ರಮಣಕ್ಕೊಳಗಾದಾಗ ಇತರರ ಗಮನ ಸೆಳೆಯಲು ಜೋರಾಗಿ ಅರಚಿ.

*(ಆಧಾರ)*

# ಪ್ರತಿಬಿಂಬಗಳು

ಭಾನುವಾರ ಬಂತೆಂದರೆ ನನ್ನ ಪಕ್ಕದ ಮನೆಯ ಓಣಿಯಲ್ಲಿ ಮಕ್ಕಳ ಸಡಗರ ಬೆಳಗ್ಗಿನಿಂದಲೇ ಪ್ರಾರಂಭವಾಗುತ್ತದೆ. ಆ ಮಕ್ಕಳ ಗಲಾಟೆ, ಆಟ-ಪಾಠ ಕೇಳುತ್ತಲೇ ನಾನು ಅಡಿಗೆ ಮನೆಯಲ್ಲಿ ಕೆಲಸದಲ್ಲಿ ತೊಡಗುತ್ತೇನೆ. 5-6 ಮಕ್ಕಳು ಸೇರಿ ಒಂದೊಂದು ಭಾನುವಾರ ಒಂದೊಂದು ವಿಧದ ಆಟವಾಡುತ್ತಾರೆ. ಅದನ್ನು ಕೇಳಿಸಿಕೊಳ್ಳುವುದೇ ನನಗೊಂದು ಸಂಭ್ರಮ.

ಹಿಂದಿನ ಭಾನುವಾರ ಶಾಲೆ-ಮೇಡಮ್ ಆಟ ನಡೆದಿತ್ತು. ಅದಕ್ಕೆ ಹಿಂದಿನ ವಾರ ಹಾಡಿನ ಆಟಗಳು. ಈ ಭಾನುವಾರವೂ ಮಕ್ಕಳ ಸಡಗರ ಓಣಿಯಲ್ಲಿ ನಡೆದಿತ್ತು. ಈ ದಿನದ ಆಟದ ವಿಶೇಷ ಏನಿರಬಹುದೆಂದು ಕಿಟಕಿಯಲ್ಲಿ ಇಣುಕಿ ನೋಡಿದೆ. ಆಟಿಕೆಗಳಿಂದ ಒಂದು ಪುಟ್ಟ ಮನೆಯೇ ಅಲ್ಲಿ ಸಜ್ಜಾಗಿರುವುದನ್ನು ಕಂಡೆ. ಒಂದು ಪಕ್ಕದಲ್ಲಿ ಸಣ್ಣ ಕುರ್ಚಿ ಮೇಜನ್ನಿರಿಸಿದ್ದಾರೆ. ಕೆಳಗೆ ಪುಟ್ಟ ಚಾಪೆ ಹಾಸಿದ್ದಾರೆ. ಸಣ್ಣ ಅಲಮಾರಿಯ ಹಲಗೆಗಳ ಮೇಲೆ ಅಡಿಗೆ ಪಾತ್ರೆ, ಸಾಮಗ್ರಿಗಳನ್ನು ಜೋಡಿಸಿದ್ದಾರೆ. ಅದರ ಪಕ್ಕದಲ್ಲಿ ಎರಡು ಇಟ್ಟಿಗೆ ಜೋಡಿಸಿಟ್ಟು ಅದರ ಮೇಲೆ ದೇವರ ಪಟ, ಮುಂದೆ ಸೊಡಿಲು, ಹೂವಿರುವ ತಟ್ಟೆ, ಅರಿಶಿನ ಕುಂಕುಮದ ಬಟ್ಟಲುಗಳು ಇತ್ಯಾದಿ ಇರಿಸಿದ್ದಾರೆ. ಅಂತು ಆ ಮೂರು ಚದರಡಿ ಜಾಗದಲ್ಲಿ ಹಾಲು, ರೂಮು, ಅಡಿಗೆಮನೆ, ದವರ ಮನೆ ಎಲ್ಲವನ್ನೂ ನಿರ್ಮಿಸಿ ಕೊಂಡಿದ್ದಾರೆಂದು ತಿಳಿಯಿತು. ಕಿಟಕಿಯಿಂದ ಈಚೆ ಬಂದು ನನ್ನ ಕೆಲಸದಲ್ಲಿ ತೊಡಗಿದೆ. ಚಿಲಿಪಿಲಿ ಮಾತುಗಳು ಕೇಳುತ್ತಿದ್ದವು. ''ಸುಶೀಲ ಬಾಗಿಲ ಮುಂದೆ, ಹಾಗೇ ಹೊಸಲು ಸಾರಿಸಿ ರಂಗೋಲಿ ಇಟ್ಬಿಡಮ್ಮಾ, ಸ್ನಾನ ಮುಗಿಸಿ ದೇವಸ್ಥಾನಕ್ಕೆ ಹೋಗ್ಬರ್ತಿನಿ.''

''ಸುಶೀಲಾ ಬಟಾಣಿ, ಹಸಿಮೆಣಸಿನಕಾಯಿ, ಕೊತ್ತಂಬರಿ, ಕರಿಬೇವು ತಂದಿದ್ದೀನಿ, ಬಟಾಣಿ ಸುಲಿದಿಟ್ಟು ಮಿಕ್ಕಿದ್ದನ್ನು ಹೆಚ್ಚಿ ಇಟ್ಬಿಡಮ್ಮಾ, ನೋಡು, ನಿಂಬೆ ಹಣ್ಣು ಒಂದಕ್ಕೆ 2 ರೂ. ಹೇಳಿದ ಅದಿಲ್ಲದಿದ್ರೂ ನಡೆಯುತ್ತೆ ಅಂತ ತರಲಿಲ್ಲ, ಅದಷ್ಟು ಮಾಡ್ಬಿಡಮ್ಮಾ ಉಪ್ಪಿಟ್ಟು ಕೆದಕ್ಬಿಡ್ತೀನಿ.

''ಸುಶೀಲಾ ಕಾಫಿ ಬೆರಸಿದ್ದೇನೆ. ಸೀನಂಗು ಕೊಟ್ಟು ನೀನು ಕುಡಿ ಬಾ''

''ಸುಶೀಲಾ ಮಗು ಅಳ್ತಾ ಇದೆ. ಹೋಗಿ ನೋಡು, ಹಾಗೆ ರವೀನ ಎಬ್ಬಿಸಿ ಸ್ಕೂಲಿಗೆ ರೆಡಿಮಾಡು. ಕರ್‍ಕೊಂಡು ಹೋಗಿ ಬಿಟ್ಬಿಟ್ಟು ಬರ್ತಿನಿ. ಒಲೆ ಮೇಲೆ ಹಾಲಿಟ್ಟಿದ್ದೀನಿ. ರವಿಗೆ ಕುಡಿಯೋದಕ್ಕೆ ಕೊಡು. ಆಗಲೇ ಎಂಟುವರೆ ಆಗೋಯ್ತು... ಸುಶೀಲಾ, ರವಿಗೆ ಡಬ್ಬೀಲಿ ಉಪ್ಪಿಟ್ಟು ಹಾಕಿ, ಸೀನಂಗೂ ಆಫೀಸಿಗೆ ಹೊತ್ತಾಗತ್ತೆ ಅವನಿಗೂ ತಟ್ಟೇಲಿ ಉಪ್ಪಿಟ್ಟು ಹಾಕ್ಕೊಡು....''

''ರವಿ ಬಾಪ್ಪ ಹೋಗೋಣ, ಹೊತ್ತಾಗತ್ತೆ. ಕೊಡಿಲ್ಲಿ ನೀರಿನ, ಟಿಫಿನ್ ಬ್ಯಾಗನ್ನು ನಾನು ಹಿಡ್ಕೋಗ್ತೀನಿ. ಹೂಂ ನಡಿ ಇನ್ನು ಬೇಗ....

ಹೀಗೆ ಒಂದೇ ಧ್ವನಿ ನನ್ನ ಕಿವಿಗೆ ಬೀಳುತ್ತಿತ್ತು. ಇನ್ನು ಯಾವ ಮಕ್ಕಳ ಧ್ವನಿಯು, ಮಾತು ಕೇಳಿ ಬರಲಿಲ್ಲ. ಇದೇನಿದು ? ಏಕಪಾತ್ರಾಭಿನಯವೆಂದು ಕಿಟಕಿಯಲ್ಲಿ ಇಣುಕಿದೆ. ಇಲ್ಲ ಸುಶೀಲಾ, ಸೀನ, ರವಿ ಎಲ್ಲರೂ ಇದ್ದರಲ್ಲಿ.

''ಸುಶೀಲಾ ಇವನನ್ನು ಶಾಲೆಗೆ ಬಿಟ್ಟು ಬರ್ತಿನಿ. ನೀನು ಸ್ನಾನ ಮಾಡಿ, ಕುಕ್ಕರ್ ಜೋಡಿಸಿ ಇಟ್ಬಿಡಮ್ಮಾ, ಬೇಗ ಬಂದ್ಬಿಡ್ತೀನಿ....''

''ಸುಶೀಲಾ ನಿನ್ನ ಗಂಡಂಗೆ ಕ್ಯಾರಿಯರ್ ರೆಡಿ ಮಾಡಿದ್ಯಾಮ್ಮಾ....''

''ನಂದೂಟ ಆಯ್ತಮ್ಮಾ ಸುಶೀಲಾ, ನೀನು ಮಾಡ್ಬಿಡು, ಹೊತ್ತು ಮಾಡ್ಕೋಬೇಡ...''

''ಉಸ್ಸಪ್ಪಾ, ಆ ಚಾಪೆ ಇಲ್ಕೊಡು ಸುಶೀಲಾ, ಹಾಗೇ ಒಂದ್ಹತ್ತು ನಿಮಿಷ ಅಡ್ಡಾಗ್ತೀನಿ''. ''ಸುಶೀಲಾ ಹೇಳೋದು ಮರೆತ್ಬಿಟ್ಟೆ ಆ ಹತ್ತಿ ತೊಳೆಗಳನ್ನ ಬಿಸಲಿಗೆ ಇಟ್ಬಿಡಮ್ಮಾ, ಹೂ ಬತ್ತಿ ಮುಗೀತಾ ಬಂದಿದೆ, ಈ ದಿನವಾದ್ರೂ ಹೊಸಿಬೇಕು....''

''ಸುಶೀಲಾ ನೋಡಮ್ಮಾ, ನಿನ್ನ ಗಂಡ ಬಂದ ಅನ್ಸುತ್ತೇ''

''ಪಾಪ ಅದೆಷ್ಟು ಸುಸ್ತಾಗಿದ್ಯೋ ಏನೋ, ನಮಗೆ ಒಂದು ದಿವಸ ಆ ಬಸ್ಸಿನಲ್ಲಿ ಹೋಗ್ಬಂದ್ರೆ ಸಾಕಪ್ಪಾ ಸಾಕನಿಸತ್ತೆ, ಪಾಪ ನಿತ್ಯಾ 2 ಹೊತ್ತೂ ಆ ರಷ್‌ನಲ್ಲಿ ಸೀಟು ಸಿಗದೆ ಇದ್ರೆ, ನಿತ್ಕೊಂಡೇ ಬರ್‍ಬೇಕು ಹೂಂ.....''

''ಅಲ್ಲೇ ಕ್ಯಾರಿಯರ್ ಇಡು. ಕುರ್ಚಿ ಮೇಲೆ ಕೂತ್ಕೊಂಡು ಸುಧಾರಿಸ್ಕೊಳೋ ಸೀನ...., ಸುಶೀಲಾ ಸೀನಂಗೆ ನೀರು ಕಾಫಿ ತೊಗೊಂಡು ಬಾಮ್ಮಾ''

''ಬಂದ್ಯಾ, ಅಯ್ಯೋ ಕಾಫಿಯೆಲ್ಲಾ ಚೆಲ್ಬಿಟ್ಯಲ್ಲೇ ಸುಶೀಲಾ, ಅದ್ಯಾಕೆ ಹಾಗೆ ಮೇಜಿನ ಮೇಲೆ ಕುಕ್ಕಿದೆ ? ಹೋಗ್ಲಿ ಕ್ಯಾರಿಯರ್‌ನ್ನ ಬಚ್ಚಲ ಮನೋಲಿ ನೀರ್‍ಹಾಕಿ ನೆನಸಿಡು. ರಾತ್ರೀನೇ ತೊಳೆದುಬಿಡು''

''ನಾನೇನು ಬರ್‍ಕೊಟ್ಟಿದ್ದೀನಾ ? ಎಲ್ಲಾ ಕೆಲಸಾನೂ ನಾನೇ ಮಾಡ್ತೇನೀಂತಾ. ನಿಮ್ಮ ನಿಮ್ಮ ಕೆಲ್ಸ ಮಾಡ್ಕೊಳೋದಕ್ಕೆ ಆಗಲ್ವಾ ? ಒಳಗೆ ಬಂದು ಕಾಫಿ ತೊಗೋಲಕ್ಕೆ ಆಗಲ್ವಾ ?

ಇದೇನಿದು ! ಬೇರೆ ಸಿಡಿಲಿನ ಧ್ವನಿ, ಯಾರದ್ದೆಂದು ಕಿಟಕಿ ಹತ್ತಿರ ಹೋಗಿ ನೋಡಿದೆ. ಅದು ಸೊಸೆ ಪಾತ್ರದ ಸುಶೀಲಳ ಧ್ವನಿ. ಆ ಮಕ್ಕಳು ಬೆರಗಾಗಿ ನನ್ನ ಕಡೆ ನೋಡಿದರು. ಆಟ ಕೆಟ್ಹೋಯ್ತಲ್ಲಾಂತ ಇರಬಹುದು. ನನಗೆ ನಗು ಬಂತು. ಆ ಹುಡಗನ್ನ ಕೇಳಿದೆ ''ಅಲ್ವೋ ಸೀನ, ನಿನಗೊಬ್ಬನಿಗೇನಾ ಆ ಕುರ್ಚಿ ? ಅದರ ಮೇಲೆ ಯಾಕೆ ಕೂತ್ಕೊಂಡೆ ?''

''ಇಲ್ಲಾ ಆಂಟೀ, ಲೇಖಾನೇ ಕೂತ್ಕೊಳೋದಕ್ಕೆ ಹೇಳಿದಳು'' ಅಂತ ತ್ತೆ ಪಾತ್ರದ ಕಡೆ ಕೈ ತೋರಿಸಿ ಒಳಗೆ ಓಡಿಬಿಟ್ಟ ಆ ಹುಡುಗ.

ಲೇಖಾ ಹೇಳಿದಳು "ನೋಡಿ ಆಂಟೀ, ಇವಳೇ ನಾನು ಸೊಸೆ ಆಗ್ತೀನೀಂತ ಒಪ್ಕೊಂಡಿದ್ದು".

ಎಲ್ಲಾ ಮಕ್ಕಳೂ ನಾಚಿದವರಂತೆ ಆ ಜಾಗ ಖಾಲಿ ಮಾಡಿದರು.

ಮುಂದಿನ ಭಾನುವಾರ ಮತ್ತೆ ಕೇಳಿ ಬಂತು ಚಿಪಿಲಿಪಿ ಧ್ವನಿಗಳು. ಕಿಟಕಿಯಿಂದ ನೋಡಿದೆ. ಓಹೋಹೋ, ಈ ದಿನ ಕ್ರಿಕೆಟ್ ಆಟಕ್ಕೆ ಸಿದ್ಧತೆ ನಡೆದಿತ್ತು.

"ಲೋ ಹರಿ, ಬ್ಯಾಟ್ಸ್ ಬಾಲ್ ತೊಗೊಂಡು ಬಾರೋ"

"ತಂದೋ ಇರೆ ಲೇಖಾ"

"ಹೂಂ ಮತ್ತೆ ಬೌಲರ್ ಯಾರು? ಬ್ಯಾಟ್ಸ್‌ಮನ್ ಯಾರು? ಸೆಟಲ್ ಮಾಡಿಬಿಡೋಣ"

"ನಾನು, ಅರುಣ, ಕಿರಣ್, ನವೀನ್ ಕ್ರಿಕೆಟ್ ಆಡ್ಕೋತೀವಿ, ನೀವು ಬೇರೆ ಆಟ ಆಡ್ಕೊಳಿ"

"ಯಾಕೋ ಹರಿ ನಾವು ಸೇರ್ಕೋಬಾರ್ದು?"

"ಅಯ್ಯೋ, ಹುಡಗೀರು ಎಲ್ಲಾದ್ರೂ ಕ್ರಿಕೆಟ್ ಆಡ್ತಾರಾ?"

"ಓಹೊಹೋ, ಯಾಕೆ ಆಡಬಾರ್ದು? ಚೋಟುದ್ದ ಇದಾನೆ ಹೇಗೆ ಮಾತಾಡ್ತಾನೆ ನೋಡು?"

"ಅಲ್ವೇ ಲೇಖಾ ಇವನಿಗೆ ಗೊತ್ತಿಲ್ಲಾ ಅನ್ಸುತ್ತೆ. ರೇಖಾ ಮಿಸ್ ಇಲ್ವಾ ಅವರು ಕ್ರಿಕೆಟ್ ಆಡ್ತಾರಂತೆ. ನಿಮಗೂ ಹೇಳ್ಕೊಡ್ತೀನೀಂತ ಹೇಳಿದ್ದಾರೆ"

"ನಂಗೂ ಗೊತ್ತು ಸುಶೀಲಾ, ಏ ಹರಿ, ಈಗ ನೀನು ಬೌಲರ್ ಆಗು, ನಾನು ಬ್ಯಾಟ್ಸ್‌ಮನ್ ಆಗ್ತೀನಿ. ನಿಂತ್ಕೊ ಶುರು ಮಾಡು ಆಟಾನಾ"

"ಸರಿಯಾಗಿ ಹಾಕ್ಕೋ ಬಾಲನ್ನ ಎಲ್ಲೆಲ್ಲೋ ಎಸೀತೀಯಲ್ಲೋ"

ಪರವಾಗಿಲ್ಲ ಟ್ರೆಂಡ್ ಚೇಂಜ್ ಆಯ್ತು ಅಂದ್ಕೊಂಡೆ.

2ನೇದು ಒಂದು ಸಣ್ಣ ವರದಿ - ಇತ್ತೀಚಿನದು.

"ನನ್ನ ಹೊಟ್ಟೇಲಿ ಉರೀತಾ ಇರುವ ಉರಿ ನಿಮಗೆ ಕಾಣ್ತಾ ಇಲ್ಲ, ನನ್ನ ಮೂಗು, ಕಿವಿ, ಕುತ್ತಿಗೇಲಿ ಇರೋದು ಮಾತ್ರ ಕಾಣ್ತಾ ಇದೆ."

ಸಂಪಾದನೆ ಇಲ್ಲದ, ಗ್ರಾಜುಯೇಟ್ ಆದ ತನ್ನನ್ನು ದುಡಿಯದಂತೆ ನಿರ್ಬಂಧಿಸಿರುವ ಗಂಡನೊಡನೆ ಏಗುತ್ತಾ, ಒಂದೆರಡು ಒಡವೆ-ಸಾಮಾನುಗಳನ್ನು ಈಗಾಗಲೇ ನೀಗಿ, ಕೈ ಬರಿದಾಗಿ, ದಿಕ್ಕಟ್ಟ ಎರಡು ಎಳೆ ಮಕ್ಕಳ ತಾಯಿಯೊಬ್ಬಳು ಆಡಿದ ಅತಿ ಸಂಕಟದ ಮಾತುಗಳಿವು.

ಆಕೆಯ ಗಂಡ ಸತ್ತ 5-6 ದಿನಗಳಲ್ಲೇ ಅತ್ತೆ ಮನೆಯವರು, ಕಿವಿ, ಕುತ್ತಿಗೆ, ಮೂಗಿನದನ್ನು ತೆಗೆದು ಬಿಡೆಂದು ಹೇಳಿದಾಗ....

## ಲೈಂಗಿಕ ದೌರ್ಜನ್ಯಕ್ಕೆ ಶಿಕ್ಷೆಗೊಳಗಾದ ಮಾಜಿ ಮಂತ್ರಿ

ಕೇರಳದ ಮಾಜಿ ಸಚಿವರೂ, ಜಾತ್ಯಾತೀತ ಜನತಾದಳದ ನಾಯಕರೂ ಆದ ಎ. ನೀಲಲೋಹಿತ ದಾಸನ್ ನಾಡಾರ್‌ರವರಿಗೆ ಒಂದು ವರ್ಷಗಳ ಸರಳ ಸೆರೆಮನೆವಾಸದ ಶಿಕ್ಷೆ ವಿಧಿಸಲಾಗಿದೆ. ಕಾರಣ, 1999ರಲ್ಲಿ ಕೇರಳದ ಐ.ಎಫ್.ಎಸ್. ಅಧಿಕಾರಿಯಾಗಿದ್ದ ಶ್ರೀಮತಿ ಪ್ರಗತಿ ವಾಸ್ತವ್‌ರವರಿಗೆ ಲೈಂಗಿಕ ಕಿರುಕುಳ ನೀಡಿದ ಆರೋಪಿಯೆಂದು ಒಂಭತ್ತು ತಿಂಗಳ ವಿಚಾರಣೆಯ ನಂತರ ಕೋಳಿಕೋಡದ ಪ್ರಥಮ ದರ್ಜೆ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯವು ಶಿಕ್ಷೆ ವಿಧಿಸಿದೆ.

ಶ್ರೀಮತಿ ಪ್ರಗತಿ ವಾಸ್ತವ್‌ರವರು ಕೋಳಿಕೋಡದ ಜಿಲ್ಲಾ ಅರಣ್ಯಾಧಿಕಾರಿಯಾಗಿದ್ದಾಗ, ಆಗಿನ ಮಂತ್ರಿಯಾಗಿದ್ದ ನೀಲ ಲೋಹಿತ ದಾಸನ್‌ರವರು ಅವರನ್ನು ಗೆಸ್ಟ್ ಹೌಸ್‌ಗೆ ಬರಹೇಳಿ ಅವರ ನೇಮಕಾತಿಗೆ ಆಯ್ಕೆಯನ್ನು ಕೇಳಿದರು. ಆ ಸಂದರ್ಭದಲ್ಲಿ ಅವರ ಮಾತಿನ ರೀತಿಯನ್ನು ಇಷ್ಟಪಡದ ಶ್ರೀಮತಿ ವಾಸ್ತವ್ ಎದ್ದು ಹೊರಹೋಗಲು ಪ್ರಯತ್ನಿಸಿದಾಗ ಸಚಿವರು ಅವರೊಡನೆ ಅಸಭ್ಯವಾಗಿ ವರ್ತಿಸಿದ್ದರು. ಈ ಘಟನೆಯಿಂದ ಮನನೊಂದ ಶ್ರೀಮತಿ ಪ್ರಗತಿ ಇಡೀ ಪ್ರಕರಣವನ್ನು ಆಗಿನ ಪೋಲಿಸ್ ಕಮೀಷನರ್ ಆಗಿದ್ದ ನೀರಾ ರಾವತ್‌ರವರಿಗೂ ಮತ್ತು ಆಗಿನ ಮಹಿಳಾ ಆಯೋಗದ ಛೇರ್ ಪರ್ಸನ್‌ರಾದ ಶ್ರೀಮತಿ ಸುಗತ ಕುಮಾರಿಯವರ ಬಳಿಯೂ ನಿವೇದಿಸಿಕೊಂಡಿದ್ದರು. ಅವರಿಬ್ಬರು ಕೂಡಲೇ ದೂರು ನೀಡಲು ಕೇಳಿಕೊಂಡಿದ್ದರೂ ಪ್ರಗತಿ ಸಮ್ಮತಿಸಿರಲಿಲ್ಲ.

ಆದರೆ 2001ರಲ್ಲಿ ಈ ಮಂತ್ರಿ ಮಹೋದಯರ ಮತ್ತೊಂದು ಲೈಂಗಿಕ ಹಗರಣ ಬೆಳಕಿಗೆ ಬಂದೊಡನೆ ಪ್ರಗತಿಯವರಿಗೆ ಧೈರ್ಯ ಬಂತು. ಹಿಂದೆ ಸಾರಿಗೆ ಸಚಿವಾಲಯದ ಕಾರ್ಯದರ್ಶಿಯಾಗಿದ್ದ ಐ.ಪಿ.ಎಸ್. ಅಧಿಕಾರಿಯಾಗಿದ್ದ ಶ್ರೀಮತಿ ನಳಿನಿ ನೆಟ್ಟೋ ಅವರೊಡನೆ ಅನುಚಿತವಾಗಿ ವರ್ತಿಸಿದ ಪ್ರಕರಣ ಹೊರಬಿದ್ದು ನೀಲ ಲೋಹಿತ್‌ರವರು ನಾಯನಾರ್ ಮಂತ್ರಿ ಮಂಡಲಕ್ಕೆ ರಾಜೀನಾಮೆ ಕೊಡಬೇಕಾಗಿ ಬಂದಿತು. ನಳಿನಿಯವರ ಪ್ರಕರಣ ಇನ್ನೂ ನ್ಯಾಯಾಲಯದಲ್ಲಿದೆ. ಆದರೆ ಈ ಪ್ರಕರಣದಿಂದ ಧೈರ್ಯ ಪಡೆದುಕೊಂಡ ಪ್ರಗತಿ 2001ರಲ್ಲಿ ನೀಲಲೋಹಿತ್ ವಿರುದ್ಧ ಕೋಳಿಕೋಡದ ಪ್ರಥಮ ದರ್ಜೆ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ದಾವೆ ಹೂಡಿದರು.

ನೀಲ ಲೋಹಿತ್‌ರಿಗೆ ಶಿಕ್ಷೆ ಕೊಡುವುದರ ಮೂಲಕ ದುಡಿಯುವ ಮಹಿಳೆಯರ ಘನತೆಯನ್ನು ನ್ಯಾಯಾಲಯ ಎತ್ತಿ ಹಿಡಿದಿದೆ.

# ಡೆಂಗಿ ಜ್ವರ ತಡೆಗಟ್ಟುವ ಬಗ್ಗೆ ಮುಂಜಾಗ್ರತೆ ಕ್ರಮಗಳು

## ಡೆಂಗಿ ಜ್ವರ ಎಂದರೇನು ?

ಡೆಂಗಿ ಜ್ವರವು ಡೆಂಗಿ ವೈರಸ್‌ನಿಂದ ಉಂಟಾಗುವ ಖಾಯಿಲೆ. ಈ ಖಾಯಿಲೆಯು ಸೋಂಕು ಹೊಂದಿದ ಈಡಿಸ್ ಈಡಿಪ್ಟೈ ಎಂಬ ಸೊಳ್ಳೆಯ ಕಚ್ಚುವಿಕೆಯಿಂದ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ.

## ಈ ರೋಗದ ಮುಖ್ಯ ಲಕ್ಷಣಗಳು

ಇದ್ದಕ್ಕಿದ್ದಂತೆ ತೀವ್ರ ಜ್ವರ, ವಿಪರೀತ ತಲೆನೋವು, ಕಣ್ಣುಗಳ ಹಿಂಭಾಗದಲ್ಲಿ ನೋವು, ಮಾಂಸಖಂಡ ಮತ್ತು ಕೀಲುಗಳಲ್ಲಿ ನೋವು ಕಾಣಿಸಿಕೊಳ್ಳುವುದು ಈ ರೋಗದ ಲಕ್ಷಣ. ಹಲವು ಬಾರಿ ಮೂಗು, ಬಾಯಿ ಮತ್ತು ವಸಡುಗಳಲ್ಲಿ ರಕ್ತಸ್ರಾವದ ಚಿಹ್ನೆಗಳು ಕಂಡುಬರುತ್ತವೆ. ಈ ಲಕ್ಷಣಗಳು ಕಂಡುಬಂದಲ್ಲಿ ತಕ್ಷಣ ಹತ್ತಿರದ ಸರ್ಕಾರಿ ಆಸ್ಪತ್ರೆಗೆ ದಾಖಲಿಸಿ, ರಕ್ತಪರೀಕ್ಷೆ ಮಾಡಿಸಿ, ಸೂಕ್ತ ಚಿಕಿತ್ಸೆ ಪಡೆಯುವುದು.

## ಸಾರ್ವಜನಿಕರು ಡೆಂಗಿ ರೋಗವನ್ನು ತಡೆಗಟ್ಟಲು ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳು.

1. ಡೆಂಗಿ ಹರಡುವ ಈಡಿಪ್ಟೈ ಸೊಳ್ಳೆಗಳು ಮನೆಯಲ್ಲಿನ ನೀರು ಶೇಖರಿಸುವ ಸಿಮೆಂಟ್ ತೊಟ್ಟಿಗಳು, ಬ್ಯಾರೆಲ್‌ಗಳು, ಡ್ರಮ್‌ಗಳು, ಏರ್‌ಕೂಲರ್, ಹೂಕುಂಡದ ನೀರಿನ ಸಂಗ್ರಹಗಳು ಇತ್ಯಾದಿಗಳಲ್ಲಿ ಉತ್ಪತ್ತಿಯಾಗುವುದರಿಂದ ಇವುಗಳನ್ನು ವಾರಕ್ಕೊಮ್ಮೆ ಸಂಪೂರ್ಣವಾಗಿ ಶುಚಿಗೊಳಿಸಿ, ಯಾವಾಗಲೂ ಭದ್ರವಾದ ಮುಚ್ಚಳಿಕೆಯಿಂದ ಮುಚ್ಚಿ ಸೊಳ್ಳೆ ಉತ್ಪತ್ತಿಯಾಗದಂತೆ ಎಚ್ಚರವಹಿಸಿ.

2. ಬಯಲಲ್ಲಿ ಟೈರು, ಎಳನೀರಿನ ಚಿಪ್ಪು ಮತ್ತು ತ್ಯಾಜ್ಯ ವಸ್ತುಗಳಲ್ಲಿ ನೀರು ಸಂಗ್ರಹವಾಗದಂತೆ ಸೂಕ್ತ ವಿಲೇವಾರಿ ಮಾಡುವುದು ಅಥವಾ ನಾಶಗೊಳಿಸುವುದು.

3. ಈ ರೋಗ ಹರಡುವ ಸೊಳ್ಳೆಗಳು ಹಗಲಲ್ಲಿ ಕಚ್ಚುವುದರಿಂದ ಸೊಳ್ಳೆ ಕಡಿತದಿಂದ ಪಾರಾಗಲು ಮಕ್ಕಳು, ವಿಶ್ರಾಂತಿ ಪಡೆಯುವ ವಯೋವೃದ್ಧರು, ಖಾಯಿಲೆಯಿಂದ ನರಳುವವರು ತಪ್ಪದೇ ಸೊಳ್ಳೆಪರದೆಯನ್ನು ಉಪಯೋಗಿಸುವುದು ಹಾಗೂ ಇತರೆ ಸೊಳ್ಳೆ ನಿರೋಧಕಗಳನ್ನು ಬಳಸುವುದರಿಂದ ಈ ರೋಗವನ್ನು ತಡೆಗಟ್ಟಲು ಸುಲಭ ಹಾಗೂ ಸರಳ ವಿಧಾನ.

**ನಿಮ್ಮ ಮನೆಯ ಒಳಗೆ ಹಾಗೂ ಮನೆಯ ಸುತ್ತ ಮುತ್ತ ಸೊಳ್ಳೆ ಉತ್ಪತ್ತಿಯನ್ನು ತಡೆಗಟ್ಟಿ ಡೆಂಗಿ ಜ್ವರ ನಿಯಂತ್ರಿಸಿ.**

ಕರ್ನಾಟಕ ವಾರ್ತೆ.

CPMG/KA/BG-8/2003-05 RNI No. 45577/88

*Posted at Basavanagudi P.O. On the 25th of every Month*

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri



## ಅಭಿನಂದನೆಗಳು

ಕನ್ನಡದ ಖ್ಯಾತ ಲೇಖಕಿ ಶ್ರೀಮತಿ ಗೀತಾ ನಾಗಭೂಷಣ್ ಅವರ 'ಬದುಕು' ಕಾದಂಬರಿಗೆ ಈ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ. ಈ ಕಾದಂಬರಿಗೆ ಈಗಾಗಲೇ ಹಲವಾರು ಪ್ರಶಸ್ತಿಗಳನ್ನು ಪಡೆದಿರುವ ಗೀತಾ ನಾಗಭೂಷಣ್ ಅವರು ಇತ್ತೀಚೆಗಷ್ಟೆ ಹಂಪಿ ವಿಶ್ವವಿದ್ಯಾಲಯದಿಂದ 'ನಾಡೋಜ' ಪ್ರಶಸ್ತಿಯಿಂದ ಸನ್ಮಾನಿತರಾಗಿದ್ದಾರೆ. ಇದರ ಜೊತೆಗೆ ಅವರಿಗೆ ಕರ್ನಾಟಕ ಸರ್ಕಾರದ ಪ್ರತಿಷ್ಠಿತ 'ದಾನ ಚಿಂತಾಮಣಿ ಅತ್ತಿಮಬ್ಬೆ' ಪ್ರಶಸ್ತಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು ರಾಜ್ಯೋತ್ಸವ ಪ್ರಶಸ್ತಿಗಳೂ ಸಂದಿವೆ.

ಉತ್ತರ ಕರ್ನಾಟಕದ ಜನಜೀವನವನ್ನು ತಮ್ಮ ಕತೆ, ಕಾದಂಬರಿಗಳಲ್ಲಿ ಚಿತ್ರಿಸುವ ಶ್ರೀಮತಿ ಗೀತಾ ನಾಗಭೂಷಣ್ ಅವರು ಆ ಪ್ರದೇಶದ ಸಂಸ್ಕೃತಿಯ ಅನುಭವವನ್ನು ಅಪ್ಪಟ ನೂರಕ್ಕೆ ನೂರು ಸೃಜನಶೀಲವಾಗಿ ನಮಗೆ ದೊರಕಿಸಿಕೊಡುತ್ತಾರೆ. ಈಗ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆದ 'ಬದುಕು' ಉತ್ತರ ಕರ್ನಾಟಕದ ಕೆಳವರ್ಗದ ಜನರ ಬದುಕಿನ ಬಹಳಷ್ಟು ಮಗ್ಗುಲುಗಳನ್ನು, ಅವರ ಕಷ್ಟ-ಸುಖಗಳನ್ನು ವಿಶಾಲವಾದ ಹಂದರದಲ್ಲಿ ನಮಗೆ ಪರಿಚಯಿಸುತ್ತದೆ. ಈ ಸಂದರ್ಭದಲ್ಲಿ ಶ್ರೀಮತಿ ಗೀತಾ ನಾಗಭೂಷಣರವರಿಗೆ ಅಚಲದ ಅಭಿನಂದನೆಗಳು.